207

ಉಪನ್ಯಾಸ ಗ್ರಂಥಮಾಲೆ

# ಕಿವಿ, ಮೂಗು, ಗಂಟಲಿನ ಸಾಮಾನ್ಯ ರೋಗಗಳು

ಡಾ. ಎಂ. ವ್ಹಿ. ವೆಂಕಟೇಶಮೂರ್ತಿ




ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.

ಜನೆವರಿ, 1992

ರಜತ ಮಹೋತ್ಸವ ಪ್ರಕಟನೆ
ಉಪನ್ಯಾಸ ಗ್ರಂಥಮಾಲೆ

207

# ಕಿವಿ, ಮೂಗು, ಗಂಟಲಿನ ಸಾಮಾನ್ಯ ರೋಗಗಳು

ಡಾ. ಎಂ. ವ್ಹಿ. ವೆಂಕಟೇಶಮೂರ್ತಿ



ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.

ಜನೆವರಿ, 1992

ಪ್ರಕಾಶಕರು : ಸದಾನಂದ ಕನವಳ್ಳಿ
ನಿರ್ದೇಶಕರು, ಪ್ರಸಾರಾಂಗ
ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ಮಾರ್ಚ, 1975    5,000 ಪ್ರತಿಗಳು.

ದ್ವಿತೀಯ ಮುದ್ರಣ : ಜನವರಿ, 1992, 5000 ಪ್ರತಿಗಳು.



ಬೆಲೆ : ರೂ. 1=00



ಮುದ್ರಕರು :
ಸ್ಫೂರ್ತಿ ಗ್ರಾಫಿಕ್ಸ್
ಕುಸನೂರ ಬಂಗಲೆ,
ಮಾಳಮಡ್ಡಿ, ಧಾರವಾಡ - 7,

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಗೊಂಡು ನಡೆಸುತ್ತಿರುವ ಜ್ಞಾನ ಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾ ಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ

ಶ್ರೀಸಾಮಾನ್ಯರು, ದಿನಸಾಮಾನ್ಯವಾದ ಈ ರೋಗಗಳ ಬಗೆಗೆ ತಿಳಿದುಕೊಂಡು, ಸುಖಜೀವನ ಸಾಗಿಸಿದರೆ ವೈದ್ಯನಾದ ನನಗೆ ಅದೇ ತೃಪ್ತಿ. ನಾನು ಕಲಿತ ವಿದ್ಯೆ, ಪಡೆದ ಅನುಭವ ಸಾರ್ಥಕವೆಂದು ನಂಬಿದ್ದೇನೆ.

ಎಂ. ವ್ಹಿ. ವೆಂಕಟೇಶಮೂರ್ತಿ
ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು.
ಕಿವಿ, ಮೂಗು, ಗಂಟಲಿನ ವಿಭಾಗ

ಕರ್ನಾಟಕ ಮೆಡಿಕಲ್,
ಕಾಲೇಜ ಹುಬ್ಬಳ್ಳಿ,
1-3-1975

# ಪ ರಿ ವಿ ಡಿ

# ಅಧ್ಯಾಯ - 1

## ಕಿವಿಯ ರಚನೆ

ಕಿವಿಯು ಮೂರು ಭಾಗಗಳಿಂದ ಕೂಡಿದೆ. ಹೊರಗಿವಿ, ನಡುಗಿವಿ, ಒಳಗಿವಿ. ಹೊರಗಿವಿ ಮತ್ತು ನಡುಗಿವಿ ಧ್ವನಿ ವಾಹಕಗಳಂತೆ ಕೆಲಸ ಮಾಡುತ್ತವೆ. ಒಳಗಿವಿಯು ಶ್ರವಣ ಜ್ಞಾನತಂತು ಮತ್ತು ನಾಳಕೋಶ ಜ್ಞಾನತಂತುಗಳನ್ನು ಹೊಂದಿರುತ್ತದೆ.

**ಹೊರಗಿವಿ :** ಇದು ಕಿವಿಯಾಲಿಕೆ ಮತ್ತು ಹೊರಗಿವಿ ಕೊಳವೆಗಳೆಂಬ ಎರಡು ಭಾಗಗಳಿಂದ ಕೂಡಿದೆ. ಕಿವಿಯಾಲಿಕೆಯು ತೆರೆದ ಸಿಂಪಿನಾಕೃತಿಯಲ್ಲಿದ್ದು ಚರ್ಮ ಮತ್ತು ಮೃದ್ವಸ್ಥಿಗಳಿಂದ ಕೂಡಿದೆ. ಕೆಳವರ್ಗದ ಪ್ರಾಣಿಗಳಲ್ಲಿ ಈ ಆಲಿಕೆಯು ದೊಡ್ಡದಾಗಿದ್ದು ದೂರದ ಶಬ್ದಗಳನ್ನು ಆಲಿಸುವುದಕ್ಕೆ ಸಹಾಯ ಮಾಡುತ್ತದೆ. ಈ ಆಲಿಕೆಯಿಂದ ಕರ್ಣ ಪಟಲದವರೆಗೂ ಇರುವ ( ★ ) ಆಕಾರದ ಕೊಳವೆಗೆ ಹೊರಗಿವಿಯ ಕೊಳವೆ ಎಂದು ಹೆಸರು. ಈ ಕೊಳವೆಯು ಮೂಳೆ ಮತ್ತು ಮೃದ್ವಸ್ಥಿಗಳಿಂದ ಮಾಡಲ್ಪಟ್ಟಿದೆ. ಈ ಮೂಳೆ ಮತ್ತು ಮೃದ್ವಸ್ಥಿ ಕೂಡುವ ಜಾಗವು ಕಿರಿದಾಗಿದ್ದು ಅನ್ಯ ಪದಾರ್ಥಗಳು ಸುಲಭವಾಗಿ ಸಿಕ್ಕಿಹಾಕಿಕೊಳ್ಳುತ್ತವೆ. ಮೃದ್ವಸ್ಥಿಭಾಗದ ಚರ್ಮವು ಕೂದಲುಗಳನ್ನು, ಜಿಡ್ಡುಸುರಿಕೆ ಗ್ರಂಥಿಗಳನ್ನು ಹಾಗೂ ಕೂಕಣೆ ಸುರಿಕೆ ಗ್ರಂಥಿಗಳನ್ನು ಹೊಂದಿರುತ್ತದೆ. ಕಿವಿಯಾಲಿಕೆ ಮತ್ತು ಹೊರಗಿವಿ ಕೊಳವೆಗಳಲ್ಲಿ ಚರ್ಮವು ಮೃದ್ವಸ್ಥಿ

ಹಾಗೂ ಮೂಳೆಗೆ ಗಟ್ಟಿಯಾಗಿ ಅಂಟಿಕೊಂಡಿರುವುದರಿಂದ ಹೊರ ಗಿವಿಯಲ್ಲಿ ಸ್ವಲ್ಪ ಉರಿಯೂತವಾದರೂ ತುಂಬಾ ನೋವಾಗುತ್ತದೆ.

**ನಡುಗಿವಿ :** ಹೊರಗಿವಿ ಮತ್ತು ಒಳಗಿವಿಗಳ ಮಧ್ಯಭಾಗಕ್ಕೆ ನಡುಗಿವಿಯೆನ್ನುತ್ತಾರೆ. ಇದು ಕಡ್ಡಿಪೆಟ್ಟಿಗೆಯಾಕಾರದಲ್ಲಿದ್ದು ತೋಳ್ಪರೆಯಿಂದ ಆವೃತವಾಗಿದೆ. ಹೊರಗಿವಿ ಮತ್ತು ನಡುಗಿವಿಯನ್ನು ಬೇರ್ಪಡಿಸುವ ತೆಳುವಾದ ಪಾರದರ್ಶಕ ಅಂಡಚಕ್ರಾಕಾರದ ತೆರೆಯೇ ಕರ್ಣಪಟಲ. ನಡುಗಿವಿಯ ಆರೋಗ್ಯಕ್ಕೆ ಅತಿ ಮುಖ್ಯವಾದ ಅಂಗ ಈ ಕರ್ಣಪಟಲ. ಇದು ಹರಿಯುವುದರಿಂದ ನಡುಗಿವಿಯಲ್ಲಿ ನಾನಾ ಕಾಯಿಲೆಗಳು ಬರುತ್ತವೆ. ನಡುಗಿವಿಯ ಮೇಲ್ಭಾವಣಿಯು ಮಿದುಳಿನ ಕರ್ಣ ತಲೆಭಾಗಕ್ಕೆ ಸಂಬಂಧಪಟ್ಟಿದೆ. ಹಿಂಭಾಗವು ಚೂಚು ಕಂದದ ಕುಹರದ ಮೂಲಕ ಮಿದುಳಿನ ರಕ್ತನಾಳಗಳಿಗೆ (Sigmoid Sinus) ಸಂಬಂಧಪಟ್ಟಿದೆ. ಕರ್ಣನಾಸಿಕ ನಾಳವು ನಡುಗಿವಿಯ ಮುಂಬದಿಯಲ್ಲಿದ್ದು, ನಡುಗಿವಿಯ ವಾಯು ಒತ್ತಡವು ವಾತಾವರಣದ ವಾಯುವತ್ತಡಕ್ಕೆ ಸಮನಾಗಿರುವಂತೆ ನೋಡಿಕೊಳ್ಳುತ್ತದೆ.

ಕರ್ಣಪೆಟ್ಟಿಗೆಯಲ್ಲಿ ಮೂರು ಕಿರುಮೂಳೆಗಳು ಒಂದಕ್ಕೊಂದು ಸರಪಳಿಯಂತೆ ಹೊಂದಿಕೊಂಡಿದ್ದು, ಶಬ್ದತರಂಗಗಳನ್ನು ಕರ್ಣಪಟಲದಿಂದ ಒಳಗಿವಿಯವರೆಗೆ ತಲುಪಿರುತ್ತವೆ. ಇದರಲ್ಲಿ ಮೊದಲನೆಯದು ಸುತ್ತಿಗೆಯಾಕಾರದಲ್ಲೂ ಎರಡನೆಯದು ಅಡಿಗಲ್ಲಿನಾಕಾರದಲ್ಲೂ, ಮೂರನೆಯದು ಕುದುರೆಯ ರಿಕಾಪಿನಾಕಾರ

ದಲ್ಲೂ ಇವೆ. ಇವುಗಳಿಗೆ ಕ್ರಮವಾಗಿ ಸುತ್ತಿಗೆ ಮೂಳೆ, ಅಡಕಿ ಮೂರ್ಳೆ, ರಿಕಾಪು ಮೂಳೆ ಎಂದು ಹೆಸರು. ''ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬಂತೆ'' ಈ ಮೂರು ಮೂಳೆಗಳು ಶ್ರವಣವಾಪಕಗಳಾಗಿ ಅತಿ ಮಹತ್ವದ ಪಾತ್ರ ವಹಿಸುತ್ತವೆ.

ಒಳಗಿವಿ : ಶ್ರವಣಕ್ಕೆ ಅಗತ್ಯವಾದ (ಜ್ಞಾನತಂತು) ಮತ್ತು ದೇಶವನ್ನು ಸಮತೋಲನದಲ್ಲಿಡಲು ಸಹಾಯಕವಾದ (ನಾಳ ಕೋಳ) ಮುಖ್ಯ ಅಂಗಗಳು ಒಳಗಿವಿಯಲ್ಲಿವೆ. ಶ್ರವಣ ಅಂಗವು ಶಂಖಾಕಾರದಲ್ಲಿದ್ದು ಇದರೊಳಗೆ ಸಾವಿರಾರು ಶ್ರವಣ ಘಟಕಗಳಿವೆ. ಇವುಗಳಿಗೆ ಕಾರ್ಡಿಯ ಅಂಗಗಳೆಂದು ಹೆಸರು. ಧ್ವನಿಯ ತರಂಗ ಅಂತರಗಳಿಗೆ ಸರಿಯಾಗಿ ಬೇರೆ ಬೇರೆ ಘಟಕಗಳು ಮೀಟಿ ಶಬ್ದಗ್ರಹಣ ಮಾಡುತ್ತವೆ. ಬೇರೆ ಬೇರೆ ಘಟಕಗಳು ಶಬ್ದಗಳನ್ನು ಗ್ರಹಿಸುವುದರಿಂದ ನಾವು ಕೇಳುವ ಮಾತುಗಳಿಗೆ ಅರ್ಥವು ರೂಪಿಸಿದಂತಾಗಿ ಈ ರೂಪಾಂತರ ಹೊಂದಿದ ತರಂಗಗಳು ಶ್ರವಣ ನರಗಳ ಮೂಲಕ ಮಿದುಳಿನ ನಿರ್ದಿಷ್ಟವಾದ ಜಾಗವನ್ನು (Auditory Cortex) ಸೇರುತ್ತವೆ. ವಿಷಯ ಸಂಗ್ರಹಣೆಗಳ ಉಗ್ರಾಣದಂತಿರುವ ಈ ಜಾಗವು ಪ್ರಚೋದನಗೊಂಡು ಕೇಳಿದ ಶಬ್ದಗಳಿಗೆ ಸರಿಯಾದ ಅರ್ಥವನ್ನು ಕೊಟ್ಟು ಮುಂದಿನ ಕಾರ್ಯಾಚರಣೆಗೆ ಅನುಕೂಲ ಮಾಡಿಕೊಡುತ್ತದೆ.

ನಾಳಕೋಶಗಳು ಒಂದೊಂದು ಕಿವಿಯಲ್ಲೂ ಮೂರು ಅರ್ಧ ಚಂದ್ರಾಕಾರದ ನಳಿಕೆಗಳಂತಿದ್ದು, ಮೇಲಕ್ಕೂ, ಹಿಂದಕ್ಕೂ ಮತ್ತು ಹೊರಕ್ಕೂ ಚಾಚಿಕೊಂಡಿವೆ. ಬಲ ಮತ್ತು ಎಡಗಿವಿಗಳಲ್ಲಿ

ಹೀಗೆ ಚಾಚಿಕೊಂಡಿರುವ ನಳಿಕೆಗಳು ಹಾಲ್ರಸದಿಂದ ಕೂಡಿದ್ದು ಜೋಡಿಯಾಗಿ ಕೆಲಸ ಮಾಡುತ್ತವೆ. ಪರಸ್ಪರ ಸ್ಥಿತಿಗಳ ಬಗೆಯೂ ಮಿದುಳಿಗೆ ಸಂದೇಶವನ್ನು ತಲುಪಿಸಿ ದೇಹವು ಸಮತೋಲನದಲ್ಲಿರಲು ಸಹಾಯ ಮಾಡುತ್ತದೆ.

## ಮೂಗು

ಪಂಚೇಂದ್ರಿಯಗಳಲ್ಲಿ ಒಂದಾದ ಮೂಗು ವಾಸನೆ ಹಿಡಿಯುವುದು ಒಂದೇ ಅಲ್ಲದೆ ಮುಖದ ಅಂದಕ್ಕೂ ಪ್ರಧಾನವಾದ ಅಂಗ. ಈ ವಿಷಯವು ಪುರಾಣದಲ್ಲೂ ಉಲ್ಲೇಖವಾಗಿರುವುದು ಎಲ್ಲರೂ ತಿಳಿದ ವಿಷಯ. ಹಿಂದಿನ ಕಾಲದಲ್ಲಿ ದಾರಿ ತಪ್ಪಿದ ಹೆಂಗಸಿಗೆ ಮೂಗು ಕೊಯ್ಯುವುದು ಪ್ರಧಾನ ಶಿಕ್ಷೆಯಾಗಿತ್ತು. ಕ್ಲಿಯೋಪಾತ್ರಳ ಮೂಗು ಅಷ್ಟು ಅಂದವಾಗಿಲ್ಲದಿದ್ದರೆ ರೋಮನ್ ಸಾಮ್ರಾಜ್ಯ ನಾಶವಾಗದೇ ಪ್ರಪಂಚದ ಸ್ಥಿತಿಯೇ ಬೇರೆಯಾಗಿರುತ್ತಿತ್ತು. ಮೂಗಿನ ಮಹತ್ವ ಹೀಗಿದೆ.

ಮೂಗನ್ನು ಹೊರ ಮೂಗು ಮತ್ತು ಮೂಗಿನಕೋಶ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು.

**ಹೊರಮೂಗು** : ಬೇರೆ ಬೇರೆ ಜನಾಂಗಗಳಲ್ಲಿ ಬೇರೆ ಬೇರೆ ಆಕಾರದಲ್ಲಿರುತ್ತದೆ. ಉದಾ : ನಿಗ್ರೋಗಳಲ್ಲಿ ಚಪ್ಪಟೆಯಾಗಿಯೂ, ಕಕೇಶಿಯನ್ಸ್‌ನಲ್ಲಿ ನೀಳವಾಗಿಯೂ, ಹಳದಿ ಜನಾಂಗಗಳಲ್ಲಿ ಮೊಂಡಾಗಿಯೂ ಇರುತ್ತದೆ. ಇದು ಮೃದ್ವಸ್ಥಿ ಮತ್ತು ಎಲುಬುಗಳಿಂದ ಕೂಡಿದೆ. ಮೇಲ್ಭಾಗದಲ್ಲಿ ಮೂಗಿನ ಮೂಳೆಗಳು

ಇದಕ್ಕೆ ಸ್ತಂಬಗಳಂತಿದ್ದು ಕೆಳಭಾಗದಲ್ಲಿ ಮೃದ್ವಸ್ಥಿಗಳು ಮೂಗಿನ ಹೊಳ್ಳೆಗಳಿಗೆ ಆಧಾರವಾಗಿವೆ.

**ಮೂಗಿನ ಕೋಶ (ಕುಳಿ)** : ಚಗ್ಗೋಪರವಾಗಿದ್ದು ಮಧ್ಯಭಾಗದಲ್ಲಿ ನಡುತಡಿಕೆಯಿಂದ ಎಡ ಮತ್ತು ಬಲ ಎಂದು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ, ಈ ನಡುತಡಿಕೆಯು ಮೃದ್ವಸ್ಥಿ ಹಾಗೂ ಎಲುಬುಗಳಿಂದ ಕೂಡಿ ಕೆಲವರಲ್ಲಿ ಅಂಕು ಡೊಂಕಾಗಿದ್ದು ಉಸಿರಾಟಕ್ಕೆ ತೊಂದರೆ ಮಾಡುವುದಲ್ಲದೆ ಕುಹರ ರೋಗಗಳಿಗೂ ಎಡೆ ಮಾಡಿಕೊಡುತ್ತದೆ. ಮೂಗಿನ ಕೋಶದ ಇಕ್ಕೆಲಗಳಲ್ಲಿ ಮೂರು ಮೃದ್ವಸ್ಥಿಗಳು ಒಂದರ ಕೆಳಗೊಂದಿದ್ದು ಮೂಗಿನ ಕುಳಿಯೊಳಗೆ ಚಾಚಿಕೊಂಡಿವೆ. ನಡು ಮೃದ್ವಸ್ಥಿ ಮೇಲೆ ಮತ್ತು ಕೆಳಭಾಗದಲ್ಲಿ ಮೂಗಿನ ಕುಹರಗಳು ರಂಧ್ರಗಳ ಮೂಲಕ ನೆರೆದುಕೊಂಡಿವೆ. ಮೂಗಿನ ಕೋಶವು ತೋಳ್ಪರೆಯಿಂದ ಆವೃತವಾಗಿದ್ದು ಉಸಿರಾಡುವ ಗಾಳಿಯನ್ನು ಹದ ಮಾಡುತ್ತದೆ. ಬಹಳಷ್ಟು ಜನ ತಿಳಿದುಕೊಂಡಂತೆ ಮೂಗು ಮಿದುಳಿಗೆ ಹೋಗದೆ ಮೂಗು ಗಂಟಲಿಗೆ ಹೋಗುತ್ತದೆ.

**ಮೂಗಿನ ಕುಹರಗಳು** : ಮೂಗಿನ ಇಕ್ಕೆಡೆಗಳಲ್ಲೂ ಮೇಲ್ಭಾದಲ್ಲೂ ಹಾಗೂ ಹಿಂಭಾಗದಲ್ಲೂ ಮೂಳೆಗಳಲ್ಲಿ ಗಾಳಿ ತುಂಬಿರುವ, ಲೋಳ್ಪರೆಯಿಂದಾವೃತವಾದ ಕುಹರಗಳಿವೆ. ಇದಕ್ಕೆ ಕ್ರಮವಾಗಿ ಮೇಲ್ದವಡೆಯ ಕುಹರ, ಹಣೆಯ ಕುಹರ, ವಂದರಿ ಕುಹರ, ಮತ್ತು ಬೆಣೆ ಕುಹರ ಎಂದು ಹೆಸರು. ಈ ಕುಹರಗಳು ಮೂಗಿನ ಉಸಿರಾಟಕ್ಕೆ ಸಹಾಯ ಮಾಡುವುದಲ್ಲದೆ ಧ್ವನಿಗೆ ಕಂಪನವನ್ನು

ಕೊಡುತ್ತವೆ ಹಾಗೂ ತಲೆಯ ಭಾರವನ್ನು ಕಡಿಮೆ ಮಾಡುತ್ತದೆ. ಮತ್ತು ತಲೆ ಚಿಪ್ಪಿನ ಕೆಳಭಾಗದ ಮುಖ್ಯ ಅವಯವಗಳನ್ನೂ ರಕ್ಷಿಸುತ್ತವೆ.

## ಗಂಟಲು

ಗಂಟಲು ಮಾಂಸಖಂಡಗಳಿಂದ ಕೂಡಿ ನಳಿಕೆಯಾಕಾರದಲ್ಲಿದ್ದು ತಲೆ ಚಿಪ್ಪಿನ ಕೆಳಭಾಗದಿಂದ ಶುರುವಾಗಿ ಅನ್ನನಾಳದವರೆಗೆ ಪಸರಿಸಿದೆ. ಇದನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಮೂಗಿನ ಹಿಂಭಾಗದಲ್ಲಿರುವುದಕ್ಕೆ ಮೂಗು ಗಂಟಲೆಂತಲೂ, ಬಾಯಿಯ ಹಿಂಭಾಗದಲ್ಲಿರುವುದಕ್ಕೆ ಬಾಯಿಗಂಟಲೆಂತಲೂ, ಧ್ವನಿ ಪೆಟ್ಟಿಗೆಯ ಹಿಂಭಾಗದಲ್ಲಿರುವುದಕ್ಕೆ ದನಿ ನಾಳಗಂಟಲೆಂತಲೂ ಕರೆಯುತ್ತಾರೆ. ಸಾಮಾನ್ಯವಾಗಿ ಗಂಟಲು ಎನ್ನುವುದನ್ನು ಬಾಯಿ ಗಂಟಲಿಗೆ ಹೇಳುತ್ತಾರೆ.

ಮೂಗುಗಂಟಲು : ಮೂಗಿನ ಹಿಂಭಾಗದಲ್ಲಿರುವ ಈ ಗಂಟಲು ಬಾಯಿ ತೆರೆದಾಗ ಕಣ್ಣಿಗೆ ಕಾಣಿಸುವುದಿಲ್ಲ. ಇದರ ಮೇಲ್ಛಾವಣಿ ಮತ್ತು ಹಿಂಭಾಗ ಸೇರುವಲ್ಲಿ ದುಗ್ಧರಸ ಕಣಜಾಲವಿದ್ದು ಇದಕ್ಕೆ ಮೂಗಳ್ಳೆ ಎನ್ನುತ್ತಾರೆ. ಇದು ಚಿಕ್ಕಮಕ್ಕಳಲ್ಲಿ ದೊಡ್ಡದಾಗಿದ್ದು ವಯಸ್ಸಾಗುತ್ತಾ ಕಿರಿದಾಗುವುದು ಮತ್ತು ವಯಸ್ಕರಲ್ಲಿ ಕಾಣಿಸುವುದಿಲ್ಲ. ಮೂಗು ಗಂಟಲಿನ ಇಕ್ಕೆಡೆಗಳಲ್ಲಿ ಕರ್ಣನಾಸಿಕ ನಾಳವು ತೆರೆದುಕೊಂಡಿದ್ದು ನಡುಗಿವಿಯ ಒತ್ತಡವನ್ನು ಹತೋಟಿಯಲ್ಲಿಡುತ್ತದೆ.

ಬಾಯ ಗಂಟಲು : ನಾಲಿಗೆಯ ಹಿಂಭಾಗದಲ್ಲೂ ಬಾಯ ಗಂಟಲಿನ ಇಕ್ಕೆಡೆಗಳಲ್ಲೂ ಮತ್ತು ಹಿಂಬದಿಯ ಲೋಳ್ಪರೆ

ಯಲ್ಲಿಯೂ ದುಗ್ಧರಸ ಗ್ರಂಥಿಗಳಿವೆ. ಇದರಲ್ಲಿ ಮುಖ್ಯವಾದದ್ದು ಇಕ್ಕೆಡೆಗಳಲ್ಲಿರುವ ಕಣಜಾಲ ಮೆಂಡಿಕೆ (Tonsills) ಇದಕ್ಕೆ ಗಲ ಗ್ರಂಥಿಯೆಂತಲೂ ಕರೆಯುತ್ತಾರೆ. ಶ್ವಾಸನಾಳ, ಅನ್ನನಾಳ ರಕ್ಷಿಸು ವುದೇ ಇದರ ಮುಖ್ಯ ಕೆಲಸ. ಇವು ನಿರ್ದಿಷ್ಟವಾದ ಕೆಲಸ ಮಾಡುವುದರಿಂದ ನಿಖರವಾದ ಸೂಚನೆಗಳಿಲ್ಲದೇ ಶಸ್ತ್ರಚಿಕಿತ್ಸೆ ಯಿಂದ ತೆಗೆಯಬಾರದು.

ಧ್ವನಿಪೆಟ್ಟಿಗೆ ಮತ್ತು ದನಿಗಂಟಲು : (Larynx & Laryngo Phrynx) ನಾಲಿಗೆಯ ಬುಡದಿಂದ ಅನ್ನನಾಳದವ ರೆಗೂ ಇರುವ ಈ ಭಾಗದ ಮುಂದುಗಡೆ ಧ್ವನಿಪೆಟ್ಟಿಗೆ, ಹಿಂದುಗಡೆ ದನಿ ಗಂಟಲೂ ಇದೆ. ಆಹಾರವನ್ನು ಅನ್ನನಾಳಕ್ಕೆ ಕಳುಹಿಸುವುದೇ ದನಿ ಗಂಟಲಿನ ಮುಖ್ಯ ಕೆಲಸ.

ಧ್ವನಿಪೆಟ್ಟಿಗೆ (ಧ್ವನಿಕುಹರ) : ಮನುಷ್ಯನಲ್ಲಿ ಮಾತು ಊಟ ದಷ್ಟೇ ಮುಖ್ಯವಾಗಿದ್ದು, ಧ್ವನಿಪೆಟ್ಟಿಗೆಯೂ ಈ ಕೆಲಸಕ್ಕೋಸ್ಕರ ಭಗವಂತನಿಂದ ಸೃಷ್ಟಿಸಲ್ಪಟ್ಟಿದೆ ಎಂದುಕೊಂಡರೂ, ಶ್ವಾಸನಾಳ ಮತ್ತು ಪುಪ್ಪುಸವನ್ನು ಸಂರಕ್ಷಿಸುವುದೇ ಇದರ ಮುಖ್ಯ ಕೆಲಸ. ಈ ಪೆಟ್ಟಿಗೆಯು ಮೃದ್ವಸ್ಥಿ. ಸ್ನಾಯು ಮತ್ತು ಮೂಳೆ ಹುರಿಗಳಿಂದ ಮಾಡಲ್ಪಟ್ಟು ಲೋಳ್ಪರೆಯಿಂದ ಆವೃತವಾಗಿದೆ. ಕತ್ತಿನಲ್ಲಿ ಎದ್ದು ಕಾಣುವ, ನುಂಗುವಾಗ ಮೇಲೆ ಕೆಳಗೆ ಓಡಾಡುವ ಚತುರ್ಭುಜಾಕಾ ರದ ಮೃದ್ವಸ್ಥಿಯೇ ಅತಿ ದೊಡ್ಡದು. ಧ್ವನಿಪೆಟ್ಟಿಗೆಯ ಒಳಭಾಗವು ಕಣ್ಣಿಗೆ ಕಾಣದಂತಿದ್ದು ಇದನ್ನು ಪರೀಕ್ಷೆ ಮಾಡಲು ಕನ್ನಡಿಯನ್ನು ಉಪಯೋಗಿಸಬೇಕು ಮತ್ತು ತಜ್ಞರಿಂದ ಮಾಡಿಸಬೇಕು.

# ಅಧ್ಯಾಯ - 2

## ಕಿವಿಯ ಕಾಯಿಲೆಗಳು

**ಅ. ಕಿವಿಯಲ್ಲಿ ಸೋವು :** ಮಾನವನ ಪಂಚೇಂದ್ರಿಯಗಳಲ್ಲಿ ಕಣ್ಣಿನಂತೆ ಕಿವಿಯೂ ಅತ್ಯಂತ ಪ್ರಮುಖವಾದ ಮತ್ತು ಅಷ್ಟೇ ಸೂಕ್ಷ್ಮವಾದ ಇಂದ್ರಿಯ. ಕಿವಿ ಶ್ರವಣಕ್ಕೆ ಅಗತ್ಯವಾದ ಮತ್ತು ದೇಹವನ್ನು ಸಮತೋಲನದಲ್ಲಿಡಲು ಸಹಾಯಕವಾದ ಮುಖ್ಯ ಅಂಗ. ಕಿವಿಗೆ ಸಂಬಂಧಿಸಿದ ಯಾವುದೇ ಕಾಯಿಲೆ ಆದರೂ ಈ ಎರಡು ಮುಖ್ಯವಾದ ಕಾರ್ಯಗಳಿಗೆ ಅಡಚಣೆಯುಂಟಾಗಬಹುದು. ಇದಲ್ಲದೆ ಕಿವಿಯಲ್ಲಿ ಸೋರುವುದು ಮತ್ತು ಕಿವಿಯಲ್ಲಿ ನೋವಾಗುವುದು ಸಾಮಾನ್ಯವಾಗಿ ಕಾಣಿಸಿಕೊಳ್ಳುವಂತಹ ಲಕ್ಷಣಗಳು.

ಹೊರಗಿವಿ, ನಡುಗಿವಿಯ ಕಾಯಿಲೆಗಳಲ್ಲದೆ, ಮೂಗು, ಮೂಗಳ್ಳೆ, ಮೆಂಡಿಕೆ, ನಾಲಿಗೆ, ಕೆಳದವಡೆ ಮತ್ತು ಧ್ವನಿ ಪೆಟ್ಟಿಗೆಯ ಕಾಯಿಲೆಗಳಾದಾಗಲೂ ಕೂಡ ಕಿವಿಯಲ್ಲಿ ನೋವು ಕಾಣಿಸಿಕೊಳ್ಳುತ್ತದೆ. ಹೊರಗಿವಿಯ ನೋವು ಕೆಲವು ವೇಳೆ ತಡೆಯಲಾರದಷ್ಟು ಮತ್ತು ಕ್ಷುಲ್ಲಕ ಕಾರಣಗಳಿಗೂ ಅಂದರೆ ಮಲಗಿದಾಗ ಕಿವಿ ಮಡಿಸಿಕೊಳ್ಳುವುದು. ಛಳಿಗೆ ಕಿವಿಯೊಡ್ಡಿದಾಗ, ಕಿವಿಯನ್ನು ತಮಾಷೆಗೆ ಹಿಂಡಿದಾಗಲೂ ಬರುತ್ತದೆ. ಇದಕ್ಕೆ ಕಾರಣ ಚರ್ಮವು ಮೃದ್ವಸ್ಥಿಗೆ ಒತ್ತಾಗಿ ಅಂಟಿಕೊಂಡಿರುವುದು.

ಶ್ರವಣನಾಳದಲ್ಲಿ ಕಟ್ಟಿ ಹಾಕಿಕೊಂಡು ಕೆರೆಯುವುದರಿಂದ ಚರ್ಮಕ್ಕೆ ಧಕ್ಕೆ ತಗಲಿ ನೋವುಂಟಾಗುತ್ತದೆ. ಕಾಸಿದ ಎಣ್ಣೆಯನ್ನು ಕಿವಿಯಲ್ಲಿ ಹಾಕುವುದರಿಂದ ಚರ್ಮವು ಸುಟ್ಟು ಕಿವಿಯ ನೋವು ಶಮನವಾಗುವುದಕ್ಕೆ ಬದಲು ಹೆಚ್ಚಾಗುತ್ತದೆ. ಕರ್ಣ ಪಟಲಕ್ಕೆ ಪೆಟ್ಟು ಬೀಳುವುದರಿಂದ ಅದು ಹರಿದು ತೀವ್ರ ತರದ ವೇದನೆಯಾಗುತ್ತದೆ. ಕಪಾಳಕ್ಕೆ ಹೊಡೆಯುವುದರಿಂದಲೂ, ಪಟಾಕ್ಷಿ ಮತ್ತಿತರ ದೊಡ್ಡ ಶಬ್ದಗಳಿಂದಲೂ ಕರ್ಣಪಟಲ ಹರಿಯಬಹುದು. ನೀರಲ್ಲಿ ಮುಳುಗು ಹಾಕುವುದರಿಂದಲೂ ವಿಮಾನವು ಕೆಳಗಿಳಿಯುವಾಗಲೂ, ಕರ್ಣಪಟಲದ ಇಕ್ಕೆಡೆಗಳಲ್ಲಿ ಗಾಳಿಯ ಒತ್ತಡದ ವ್ಯತ್ಯಾಸಗಳಾಗುವುದರಿಂದ ಕರ್ಣಪಟಲಕ್ಕೆ ಪೆಟ್ಟು ಬಿದ್ದು ಕಿವಿ ನೋವುಂಟಾಗುತ್ತದೆ.

ನಡುಗಿವಿಯ ಕಾಯಿಲೆಗಳು ಕಿವಿಯಲ್ಲಿ ನೋವುಂಟುಮಾಡುತ್ತವೆ. ಪೆಟ್ಟು, ಉರಿಯೂತ, ಕ್ಯಾನ್ಸರ್ ಈ ಕಾಯಿಲೆಗಳು ಮುಖ್ಯ ಕಾರಣ. ಮುಖನರದ ತದ್ದು (Herpis) ಅಸಾಧ್ಯ ಕಿವಿ ನೋವಿಗೆ ಕಾರಣ. ಈ ರೀತಿಯಾಗಿ ಕಿವಿಯಲ್ಲಿ ನೋವು ಕಾಯಿಲೆಯಾಗಿರದೆ, ಕಾಯಿಲೆಯ ಲಕ್ಷಣವಾಗಿರುವದರಿಂದ ಅದನ್ನು ಅಲಕ್ಷಿಸಬಾರದು. ಕಾಯಿಲೆಯನ್ನು ಕಂಡುಹಿಡಿದು ಚಿಕಿತ್ಸೆ ಮಾಡಿಸಬೇಕು. ಗಂಟಲಿನ ಕ್ಯಾನ್ಸರ್ ರೋಗದವರು ಕಿವಿಯಲ್ಲಿ ನೋವು ಕಾಣಿಸಿಕೊಂಡು ತಿಂಗಳುಗಟ್ಟಲೆ ಕಿವಿಗೆ ಎಣ್ಣೆಯನ್ನು ಬಿಟ್ಟುಕೊಳ್ಳುತ್ತಾ ಗಂಟಲಿನ ರೋಗ ಉಲ್ಬಣ ಸ್ಥಿತಿಗೆ ತಂದುಕೊಂಡಂಥಾ ಉದಾಹರಣೆಗಳು ಬಹಳ.

**ಆ. ಹೊರಗಿವಿಯ ಕಾಯಿಲೆಗಳು :** ಕಿವಿಯಾಲೆಗೆ ಪೆಟ್ಟು ಬಿದ್ದಾಗ ರಕ್ತದ ಹೊಪ್ಪಳೆಯಾಗುತ್ತದೆ (Haematoma). ಇದು ಸಾಮಾನ್ಯವಾಗಿ ಕುಸ್ತಿ ಆಟಗಾರರಲ್ಲಿ ಉಂಟಾಗುವ ಬೇನೆ. ಇದನ್ನು ಹಾಗೆಯೇ ಬಿಟ್ಟರೆ ನೋವು ಹೆಚ್ಚಾಗಿ ಸೋಂಕು ತಗಲಿ ಕೀವಾಗಬಹುದು. ಕಿವಿಯ ಮೃದ್ವಸ್ಥಿಗೂ ಸೋಂಕು ತಗಲಬಹುದು. ಆಗ ಕಿವಿಯಾಲೆಯು ಸುಕ್ಕಿ ವಿಕಾರವಾಗುತ್ತದೆ. ಹೊಪ್ಪಳೆಯಾದಾಗ ಕಟ್ಟಿಕೊಂಡಿರುವ ರಕ್ತವನ್ನು ಚುಚ್ಚುಮದ್ದು ಕೊಡುವ ಸೀರ್ ಕೊಳವೆಯಿಂದ ಸಂಪೂರ್ಣವಾಗಿ ಹೊರಕ್ಕೆ ತೆಗೆದು ಪುನಃ ಸ್ವಾಭಾವಿಕ ಸ್ಥಿತಿಗೆ ಬರುವಂತೆ ಮಾಡಬಹುದು. ಸೋಂಕು ತಗಲಿದಾಗ ಚುಚ್ಚು ಮದ್ದುಗಳನ್ನು ಕೊಟ್ಟು ಸೋಂಕನ್ನು ತಡೆಯಬಹುದು. ಮೃದ್ವಸ್ಥಿ ಕೊಳೆತಾಗ ಅದನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದು ಹಾಕಿ ಕಿವಿಯಾಲೆಯನ್ನು ಸರಿಪಡಿಸಬೇಕು.

**ಕಿವಿಯಲ್ಲಿ ಗುಗ್ಗೆ :** ಹೊರಗಿವಿ ಕೊಳವೆಯ ಚರ್ಮದಲ್ಲಿರುವ ಗ್ರಂಥಿಗಳು ಗುಗ್ಗೆ (ಕೂಕಣಿ) ಯನ್ನು ಉತ್ಪತ್ತಿಮಾಡುತ್ತವೆ. ಹೊರಗಿವಿ ಕೊಳವೆಯಲ್ಲಿ ಧೂಳು, ಕೊಳೆ ಇತ್ಯಾದಿಯನ್ನು ಹಿಡಿದು ಹೊರಗೆ ಹಾಕಲು ಗುಗ್ಗೆ ಸಹಾಯಮಾಡುತ್ತದೆ. ಗುಗ್ಗೆಯ ಉತ್ಪತ್ತಿ ಕೆಲವರಲ್ಲಿ ಇರುವುದಿಲ್ಲ. ಮತ್ತೆ ಕೆಲವರಲ್ಲಿ ಅಧಿಕವಾಗಿರುತ್ತದೆ. ಗಣಿ ಕೆಲಸಗಾರರಲ್ಲಿ, ಬೆಂಕಿಉರಿಯೊಂದಿಗೆ ಕೆಲಸಮಾಡುವವರಲ್ಲಿ ಹಾಗೂ ಕಸಗುಡಿಸುವವರಲ್ಲಿ ಗುಗ್ಗೆ ಉತ್ಪತ್ತಿ ಅಧಿಕ. ಗುಗ್ಗೆ ಕಿವಿಯಲ್ಲಿ ತುಂಬಿದಾಗ ಧ್ವನಿ ತರಂಗಗಳು ಕಿವಿಯ ಒಳಪೊರೆಯವರೆಗೆ ಹಾಯುವುದಕ್ಕೆ ಅಡಚಣೆ ಉಂಟಾಗಿ ಕಿವುಡು ತೋರುತ್ತದೆ.

ಆಗ ಹೊರಗಿವಿ ಕೊಳವೆಯಲ್ಲಿ ತುರಿ ನೋವು ಇತ್ಯಾದಿ ಚಿಹ್ನೆಗಳು ಕಾಣಿಸಿಕೊಳ್ಳುವುವು. ಸ್ನಾನದ ನಂತರ, ಅಥವಾ ಈಜಿ ಹೊರಗೆ ಬಂದೊಡನೆ ಕೆಲವೊಮ್ಮೆ ಕಿವುಡು ಕಾಣಿಸಿಕೊಳ್ಳುವದು, ಸಾಮಾನ್ಯವಾಗಿ ಕಿವಿಯಲ್ಲಿರುವ ಗುಗ್ಗೆಯಿಂದಲೇ, ಗುಗ್ಗೆಯನ್ನು ಪಿಚಕಾರಿಯಿಂದ ಅಥವಾ ಇತರ ಸಾಧನೆಗಳಿಂದ ಸುಲಭವಾಗಿ ತೆಗೆಯಬಹುದು. ಗುಗ್ಗೆ ಗಟ್ಟಿಯಾಗಿದ್ದರೆ ಆಲಿವ್ ಆಯಿಲ್, ಪ್ರತಿಶತ 4 ಸೋಡಾ ಬೈಕಾರ್ಬ್ ಅಥವಾ ಇನ್ನಿತರ ಔಷಧಿಗಳಿಂದ ಮೆದುವಾಗುವಂತೆ ಮಾಡಿ ಅನಂತರ ತೆಗೆಯಬೇಕು. ಶ್ರವಣೇಂದ್ರಿಯ ಬಹಳ ಸೂಕ್ಷ್ಮವಾದದ್ದು. ಗುಗ್ಗೆ ತೆಗೆಯುತ್ತೇವೆಂದು ಸಿಳ್ಳೆ ಊದಿಕೊಂಡು ಬರುವ ದಾರಿಗರಿಂದ ಗುಗ್ಗೆ ತೆಗೆಸುವುದು ಅಪಾಯಕರವೆಂದು ಬೇರೆ ಹೇಳಬೇಕಾಗಿಲ್ಲ.

**ಹೊರಗಿವಿ ಚರ್ಮದ ಉರಿಯೂತ** : ಕಿವಿಯಲ್ಲಿ ಕಡ್ಡಿ, ಪೆನ್ಸಿಲ್, ಬೀಗದ ಕೈ ಮುಂತಾದವುಗಳನ್ನು ಹಾಕಿ ಕೆರೆದುಕೊಳ್ಳುವುದು ನಮ್ಮಲ್ಲಿ ಬಹುಜನರಿಗೆ ಅಭ್ಯಾಸವಾಗಿದೆ. ಹೀಗೆ ಕೆರೆದುಕೊಳ್ಳುವುದರಿಂದ ಹೊರಗಿವಿ ಚರ್ಮದಲ್ಲಿ ಗಾಯವಾಗಿ ತುಂಬಾ ನೋವಾಗುತ್ತದೆ. ಸಾಮಾನ್ಯವಾಗಿ ಕಿವಿಯಲ್ಲಿ ನೋವು ಕಾಣಿಸಿದಾಗ ಮನೆಯಲ್ಲಿ ಹಿರಿಯರು ಕಾಯಿಸಿದ ಎಣ್ಣೆ, ಕೆಲ ಸಮಯ ಬೆಳ್ಳುಳ್ಳಿ ಕುಟ್ಟಿ ಹಾಕುತ್ತಾರೆ. ಇದು ತಪ್ಪು. ಈ ಪದಾರ್ಥಗಳು ಹೊರಗಿವಿಯ ಚರ್ಮವನ್ನು ಕೆರಳಿಸಿ ಉರಿಯೂತಕ್ಕೆ ದಾರಿ ಮಾಡಿಕೊಡುತ್ತದೆ. ಆದ್ದರಿಂದ ಕಿವಿಯಲ್ಲಿ ನೋವು, ತುರಿಕೆ ಉಂಟಾದಾಗ, ಕೂಡಲೇ ವೈದ್ಯರನ್ನು ಕಾಣುವುದು ಉತ್ತಮ. ಹೊರ

ಗಿವಿಯ ಚರ್ಮದ ಕೆರಳುವಿಕೆ ಈ ಅನ್ಯ ಪದಾರ್ಥಗಳಿಂದಲೇ ಅಲ್ಲದೇ ಮಾರುಕಟ್ಟೆಯಲ್ಲಿ ಸಿಗುವ ಕಿವಿಯ ಔಷಧಗಳಿಂದಲೂ ಬರಬಹುದು. ಅದನ್ನು ಸಿಕ್ಕಾಪಟ್ಟೆ ಮತ್ತು ದೀರ್ಘಕಾಲ ಹಾಕುವುದು ಅಪಾಯಕಾರಿ. ಕಿವಿಯ ಕರಪಾಣಿ ಚರ್ಮದ ಕೆರಳುವಿಕೆಗೆ ಮತ್ತೊಂದು ಕಾರಣ. ಇದು ಬಂದಾಗ ವಿಪರೀತ ತುರಿಕೆ ಆಗುವುದು. ಕಿವಿಯಲ್ಲಿ ನೀರಿನಂತೆ ಸೋರುವುದು. ಈ ನೀರು ಹೆಪ್ಪುಗಟ್ಟಿ ಕಿವಿ ಮುಚ್ಚಿಕೊಳ್ಳುವುದೂ ಆಗುತ್ತದೆ. ಈ ಕಾಯಿಲೆಯಿಂದ ಮನಸ್ಸಿಗೆ ವಿಪರೀತ ಬೇಸರ ಬರುತ್ತದೆ. ಚಿತ್ತಸ್ಥೈರ್ಯದಿಂದ ಯಾವ ಕೆಲಸವನ್ನು ಮಾಡುವುದಕ್ಕೆ ಆಗುವುದಿಲ್ಲ. ಇದನ್ನು ತೊಡೆದು ಹಾಕುವುದು ಸುಲಭವಾದ ಕೆಲಸವಲ್ಲ. ಕಾರಣಗಳನ್ನು ಕಂಡುಹಿಡಿದು ಸ್ಟೆರಾಯಿಡ್ (ಘನತಿಲಕ) ಔಷಧಿಗಳಿಂದ ಶಮನ ಮಾಡಬಹುದು.

ಶ್ರವಣನಾಳದಲ್ಲೇಳುವ ಕುರುಗಳು : ಹೊರಗಿವಿ ಕೂದಲಿನ ಕೋಶಕಗಳ ಸೋಂಕಿನಿಂದ ಉಂಟಾಗುತ್ತದೆ. ಕಿವಿಯಲ್ಲಿ ತಡೆಯಲಾಗದ ನೋವು ಕಾಣಿಸುತ್ತದೆ. ಕ್ರಮೇಣ ಈ ನೋವು ತಲೆಗೂ, ದವಡೆಗೂ ಹರಡುತ್ತದೆ. ದವಡೆಯನ್ನು ಅಲ್ಲಾಡಿಸಲೂ ಆಗುವುದಿಲ್ಲ. ಕಿವಿಯಾಲೆಯನ್ನಾಡಿಸಿದರೂ ಕೂಡ ತುಂಬಾ ನೋವಾಗುತ್ತದೆ. ಕುರು ದೊಡ್ಡದಾಗಿ ಹೊರಗಿವಿ ಕೊಳವೆಯನ್ನು ಮುಚ್ಚಿದರೆ ಕಿವಿ ಕೇಳಿಸುವುದೂ ಕಡಿಮೆಯಾಗುತ್ತದೆ. ಕುರು ಒಡೆದಾಗ ಕೀವು ರಕ್ತ ಹೊರಬಂದು ನೋವು ಕಡಿಮೆಯಾಗುತ್ತದೆ. ಇಂಥ ಕುರುಗಳಿಗೆ ಪ್ರಾರಂಭದಲ್ಲೇ ಶಾಖ ಕೊಡಬೇಕು. ಪೂತಿ ನಾಶಕಗಳಿಂದ

ಚಿಕಿತ್ಸೆ ಮಾಡಬೇಕು. ಪ್ರತಿಜೀವಕಗಳನ್ನು (Antibiotics) ವೈದ್ಯರ ಸಲಹೆ ಮೇರೆಗೆ ಕೊಡಬೇಕಾಗುತ್ತದೆ. ಕೆಲವೊಮ್ಮೆ ಶಸ್ತ್ರ ಚಿಕಿತ್ಸೆಯಿಂದ ಕೀವನ್ನು ಹೊರತೆಗೆದು ಶುದ್ಧಿಗೊಳಿಸಬೇಕಾಗುತ್ತದೆ.

ಮೇಲಿಂದ ಮೇಲೆ ಈ ರೀತಿಯ ಕುರುಗಳು ಸಿಹಿಮೂತ್ರ ರೋಗವಿರುವವರಿಗೆ ಕಾಣಿಸಿಕೊಳ್ಳುತ್ತವೆ. ಅಂತಹವರು ಸಿಹಿಮೂತ್ರರೋಗವನ್ನು ತಡೆಗಟ್ಟಬೇಕು.

## ನಡುಗಿವಿಯ ಕಾಯಿಲೆಗಳು

**ನಡುಗಿವಿಯ ಉರಿಯೂತ :** ನಡುಗಿವಿಯ ಲೋಳ್ಪರೆಯ ಉರಿಯೂತವು ನಾನಾ ಕಾರಣಗಳಿಂದ ಬರುತ್ತದೆ. ನೆಗಡಿಯಾದಾಗ ಕರ್ಣನಾಸಿಕನಾಳೆಯಿಂದ ಸೋಂಕು ನಡುಗಿವಿಗೆ ಹೋಗಿ ಉರಿಯೂತ ಉಂಟುಮಾಡುವದು ಸರ್ವೇಸಾಮಾನ್ಯ. ನೆಗಡಿಯಾದಾಗ ಜೋರಾಗಿ ಸಿಂಬಳ ಕಳೆಯುವುದು, ನೀರಿನಲ್ಲಿ ಮುಳುಗಿ ಈಜಾಡುವುದು, ಮತ್ತು ಆಳಕ್ಕೆ ಹೋಗುವುದು, ಹಾಗೂ ವಿಮಾನ ಪ್ರಯಾಣ ಮಾಡುವುದು ನಡುಗಿವಿಯ ಉರಿಯೂತಕ್ಕೆ ನಾಂದಿ ಹಾಕಿದಂತೆ. ಇದಲ್ಲದೆ ಕರ್ಣಪಟಲ ಹರಿದಿರುವಾಗ ಕಿವಿಯಲ್ಲಿ ನೀರು ಹಾಕುವುದು, ಪಿಚಕಾರಿ ಹೊಡೆಯುವುದು, ಕಾಸಿದ ಎಣ್ಣೆ ಬಿಡುವುದು ಇವುಗಳಿಂದ ಉರಿಯೂತ ಬರುತ್ತದೆ. ಹಳ್ಳಿಗಳ ಕಡೆ ಬಾಯತುಂಬಾ ನೀರು ಹಾಕಿಕೊಂಡು ಮುಕ್ಕಳಿಸಿ ಕಿವಿಯೊಳಗೆ ಉಗಿದು ಕಿವಿಯನ್ನು ತೊಳೆಯುವ ಅಭ್ಯಾಸವಿದೆ. ಇದಂತೂ ಮಹಾಪರಾಧ.

**ಕಿವಿಯುರಿಯೂತದ ಲಕ್ಷಣಗಳು** : ಕರ್ಣನಾಸಿಕ ನಾಳದ ಉರಿಯೂತದಿಂದ ಕಿವಿಯಲ್ಲಿ ನೋವು, ಕಿವಿಯ ಮಾಂದ್ಯ ಮತ್ತು ಕಿವಿಯು ಮುಚ್ಚಿಕೊಂಡಂತೆ ಆಗುವುದು ಇವು ಮೊದಲ ಲಕ್ಷಣಗಳು. ಅನಂತರ ಕಿವಿಯ ನೋವು ಜಾಸ್ತಿಯಾಗಿ ತಂತಿ ಮೀಟಿದಂತಾಗುವದು. ಕೆಲವು ವೇಳೆ ಸಹಿಸಲಸಾಧ್ಯವಾಗಬಹುದು. ಈ ನೋವು ಉಗುಳು ನುಂಗುವುದರಿಂದ ಜಾಸ್ತಿ ಆಗಬಹುದು. ಈ ನೋವಿನ ಜೊತೆಗೆ ಜ್ವರವು ಕಾಣಿಸಿಕೊಳ್ಳಬಹುದು. ಈ ನೋವಿನ ಜೊತೆಗೆ ಜ್ವರವು ಕಾಣಿಸಿಕೊಳ್ಳಬಹುದು. ಕೀವು ನಡುಗಿವಿಯಲ್ಲಿ ಜಾಸ್ತಿಯಾಗುತ್ತಿರುವಂತೆ ನೋವು ಜಾಸ್ತಿಯಾಗಬಹುದು. ಕರ್ಣಪಟಲ ಕೆಂಪಾಗುವುದು ಮತ್ತು ಉಬ್ಬುವುದು. ಕೀವು ತುಂಬಿ ಕರ್ಣಪಟಲ ಹರಿದಾಗ, ಹೊರಗಿವಿಗೆ ಸ್ರವಿಸಿ ನೋವು ಕಮ್ಮಿಯಾಗುವುದು.

ಮೊದಲಿನ ಲಕ್ಷಣಗಳು ಕಂಡುಬಂದಾಗ ಪೆನಿಸಿಲಿನ್ ಇಂಜಕ್ಷನ್ನಾಗಲೀ, ಸಲ್ಫನಮೈಡ್ (Sulphonamide) ಆಗಲಿ ತೆಗೆದುಕೊಳ್ಳಬೇಕು. ನೋವನ್ನು ಶಮನ ಮಾಡುವ ಔಷಧಗಳನ್ನು ಸೇವಿಸಬೇಕು. ಟಿಂಕ್ಚರ್ ಬೆಂಜಾಯಿನ್ ಹೊಗೆ ತೆಗೆದುಕೊಳ್ಳುವುದರಿಂದ ಮೂಗಿಗೆ ಮತ್ತು ಕರ್ಣನಾಸಿಕ ನಾಳದ ಉರಿಯೂತ ಕಡಿಮೆಯಾಗಿ ಹಿತವೆನಿಸುವುದು. ಕರ್ಣಪಟಲ ಹರಿದಾಗ ಸ್ರವಿಸುವ ಕೀವನ್ನು ಹತ್ತಿಯಿಂದ ಸ್ವಚ್ಛಮಾಡಿ ಔಷಧಿಯನ್ನು ಹಾಕಬೇಕು. ಕೀವು ಸೋರುವುದು ನಿಂತರೂ ಕೂಡ ಕಿವಿ ಕೇಳಿಸದೇ ಇರುವುದು ಸ್ವಲ್ಪ ಕಾಲ ಇರಬಹುದು.

ಮೇಲಿಂದ ಮೇಲೆ ಬರುವ ಉರಿಯೂತವನ್ನು ತಪ್ಪಿಸುವುದಕ್ಕೆ ಗಂಟಲು ಮತ್ತು ಮೂಗಿನ ಕುಹರಗಳನ್ನು ಪರೀಕ್ಷೆ ಮಾಡಿಸಿ, ಮೆಂಡಿಕೆ, ಮೂಗಳ್ಳೆಗಳಿಗೆ ಸೋಂಕು ತಗುಲಿದ್ದರೆ ಅವುಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆಸಬೇಕು. ಕಿವಿಗೆ ಸೋಂಕು ತಗುಲದಂತೆ ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕು. ಹೀಗೆ ಮಾಡುವುದರಿಂದ ಮುಂದಾಗುವ ಅನಾಹುತಗಳನ್ನು ತಡೆಗಟ್ಟಬಹುದು. ಹರಿದುಹೋಗಿರುವ ಕರ್ಣಪಟಲವನ್ನು ಕಸಿಮಾಡಿ ಮುಚ್ಚಬೇಕು. ಇದಲ್ಲದೆ ಈ ಕೆಳಗಿನ ಸಂದರ್ಭಗಳಲ್ಲಿ ತುರ್ತು ಶಸ್ತ್ರ ಚಿಕಿತ್ಸೆ ಮಾಡಬೇಕಾಗುವುದು :

1) ಸೋರುತ್ತಿರುವ ಕಿವಿಯಲ್ಲಿ ನೋವು ಕಾಣಿಸಿಕೊಳ್ಳುವದು ಮತ್ತು ಚೂಚುಕಂದದ ಕುಹರಕ್ಕೆ ಉರಿಯೂತ ಹರಡುವುದು.

2) ನೋವಿನ ಜೊತೆಗೆ ಜ್ವರ, ಚಳಿ ಬರುವುದು.

3) ಕಿವಿಯ ಹಿಂಭಾಗದಲ್ಲಿ ಊತ ಬರುವುದು.

4) ವಿಪರೀತ ತಲೆ ತಿರುಗುವುದು ಮತ್ತು ಅದರೊಟ್ಟಿಗೆ ವಾಂತಿಯಾಗುವುದು.

5) ಸೋರುತ್ತಿರುವ ಕಿವಿಯ ಭಾಗದ ಮುಖದ ಸ್ನಾಯುಗಳಿಗೆ ಲಕ್ವ ಹೊಡೆಯುವುದು.

6) ಜ್ಞಾನ ತಪ್ಪುವುದು ಹಾಗೂ ವಿಕಾರವಾಗುವುದು.

## ಚೂಚುಕಂದ ಕುಹರದ ಉರಿಯೂತ (Mustoiditis)

ಚೂಚುಕಂದ ಕುಹರದ ಉರಿಯೂತ ನಡುಗಿವಿಯಿಂದ ಹರಡುತ್ತದೆ. ಹೀಗೆ ಆದಾಗ ಕಿವಿಯಲ್ಲಿ ಸೋರುವುದು ಜಾಸ್ತಿಯಾಗುತ್ತದೆ. ಅಳ್ಳಿಯಿಂದ ಕೀವನ್ನು ಹೊರಗಿವಿಯಿಂದ ತೆಗೆಯುತ್ತಿದ್ದಂತೆಯೇ ತಿರುಗಿ ತುಂಬಿಕೊಳ್ಳುವುದು. ಕಿವಿಯೊಳಗೆ ಮಾತ್ರ ಇದ್ದ ನೋವು ಕಿವಿಯ ಮೇಲೆ, ಹಿಂದೆ ಮತ್ತು ಕೆಳಗೆ ಹರಡುತ್ತದೆ. ಚಿಕ್ಕಮಕ್ಕಳಲ್ಲಿ ಕತ್ತು ಅಲ್ಲಾಡಿಸುವುದೂ ಕೂಡ ನೋವು ಉಂಟಾಗಿ ಬಿಗಿ ಹಿಡಿಯುತ್ತಾರೆ. ಜ್ವರ ವಿಶೇಷವಾಗಿ ಬಂದು ರೋಗಿ ಹಾಸಿಗೆ ಹಿಡಿಯುತ್ತಾನೆ. ಕಿವಿಯ ಹಿಂದೆ ಬಾವು ಬಂದು ತುಂಬಾ ನೋವಾಗುತ್ತೆ. ಇಂತಹ ಸಂದರ್ಭಗಳಲ್ಲಿ ಅಲಕ್ಷ್ಯ ಮಾಡದೆ ಚಿಕಿತ್ಸೆ ಮಾಡಬೇಕು. ಸೂಜಿಮದ್ದನ್ನು 4 ತಾಸುಗಳಿಗೊಂದು ಸಾರಿ ಕೊಡಬೇಕು. 24 ತಾಸಿನಲ್ಲಿ ಜ್ವರ ನೋವು ಕಮ್ಮಿಯಾಗದಿದ್ದರೆ ತುರ್ತು ಶಸ್ತ್ರ ಚಿಕಿತ್ಸೆ ಮಾಡಬೇಕು.

### ತೀವ್ರತರ ದುಷ್ಪರಿಣಾಮಗಳು

ನಡುಗಿವಿಯಿಂದ ಸೋಂಕು ಮಿದುಳಿಗೆ ಹರಡಿ

ಅ) ಮಿದುಳಿನ ಉರಿಯೂತ

ಆ) ಮಿದುಳಿನಲ್ಲಿ ಕೀವು, ಕುರು ಮತ್ತು

ಇ) ಮಿದುಳಿನ ರಕ್ತನಾಳಗಳಲ್ಲಿ ಹೆಪ್ಪುಗಟ್ಟುವಿಕೆ ಆಗಬಹುದು.

ಈ) ಸೋಂಕಿನ ಮುಖ್ಯ ಲಕ್ಷಣವೆಂದರೆ -

1) ವಿಪರೀತ ಜ್ವರ ಮತ್ತು ನಡುಕ (38' ಸಿ- 40' ಸಿ) ಮೇಲಿಂದ ಮೇಲೆ ಬರುವುದು.

2) ರೋಗಿಯು ಕೆಲವೇ ದಿನಗಳಲ್ಲಿ ಕ್ಷಯಿಸುವುದು.

3) ಜ್ವರದ ಜೊತೆಗೆ ಮನಸ್ಸು ಕೆರಳುವುದು, ಅಥವಾ ಕ್ಷೀಣವಾಗಿ ಮಾತನಾಡುವುದು, ಹಾಗೆಯೇ ಜ್ಞಾನ ತಪ್ಪುವುದು.

4) ಮೈ ಸೆಟೆದುಕೊಳ್ಳುವದು.

5) ಅರ್ಧಾಂಗವಾಯು ಬರುವುದು ಮತ್ತು ಕಣ್ಣು ಮಂಜಾಗುವುದು.

ಕೆಲವು ವೇಳೆ ಕಿವಿಯಲ್ಲಿ ಸೋರುವುದು ನಿಂತು ಮೇಲ್ಕಂಡ ಚಿಹ್ನೆಗಳು ಕಾಣಿಸಬಹುದು. ಈ ರೀತಿಯಾದಾಗ ವಿಶೇಷ ತುರ್ತ ಚಿಕಿತ್ಸೆ ಮಾಡದಿದ್ದರೆ ಪ್ರಾಣಾಪಾಯ ಖಂಡಿತ.

ಮಿದುಳಿನಲ್ಲಿ ಕುರು ಕೆಲವು ಸಂದರ್ಭಗಳಲ್ಲಿ ತೀವ್ರವಾಗಿ ಬರದೇ ನಿಧಾನವಾಗಿ ಬರಬಹುದು. ಮಿದುಳು ಕೆರಳಿದ ಲಕ್ಷಣಗಳು ಏನೂ ಕಾಣಿಸದೇ ಇರಬಹುದು. ದಿನ ದಿನಕ್ಕೂ ಜಾಸ್ತಿಯಾಗುತ್ತಿರುವ ತಲೆ ನೋವು, ಜೊತೆಗೆ ತಲೆ ತಿರುಗುವುದು, ವಾಂತಿಯಾಗುವುದು, ರೋಗಿಯ ಚಹರೆಯಲ್ಲಿ ವ್ಯತ್ಯಾಸವಾಗುವುದು, ಕೈಕಾಲು ಸ್ವಾಧೀನ ತಪ್ಪುವುದು, ನಡೆಯುವಾಗ ತೂರಾಡುವುದು ಇವುಗಳು ಕಂಡ ಕೂಡಲೇ ತಜ್ಞರಿಂದ ಪರೀಕ್ಷೆ ಮಾಡಿಸುವುದು ಅತಿಮುಖ್ಯ. ವಿಶೇಷ ಚಿಕಿತ್ಸೆ ಮಾಡಿದರೂ ಈ ಕಾಯಿಲೆಗೊಳಗಾದ ಪ್ರತಿಶತ 30 ಜನರು ಸಾವನಪ್ಪುತ್ತಾರೆ.

## (ಈ) ಕಿವುಡು

ಕಿವುಡು ರೋಗವಲ್ಲ, ರೋಗದ ಲಕ್ಷಣ ಮಾತ್ರ. ಮಗುವು ಗರ್ಭಕೋಶದಲ್ಲಿರುವಾಗಿನಿಂದ ಹಿಡಿದು ವೃದ್ಧಾಪ್ಯದವರೆಗೂ ನಾನಾ ಕಾರಣಗಳಿಂದ ಬರಬಹುದು.

## ಕಿವುಡಿನ ವಿಧಗಳು

1) ವಾಹಕ ಕಿವುಡು : ಇದು ಹೊರಗಿವಿ, ಕರ್ಣಪಟಲ ಮತ್ತು ನಡುಗಿವಿಯ ರೋಗಗಳಿಂದ ಉಂಟಾಗುತ್ತದೆ. ಈ ರೀತಿಯ ಕಿವುಡರಲ್ಲನೇಕರು ತಗ್ಗು ಧ್ವನಿಯಲ್ಲಿ ಮಾತನಾಡುತ್ತಾರೆ.

2) ಶಂಖದ ಕಿವುಡು : ಇದು ಒಳಗಿವಿಯಲ್ಲಿನ ಕಾರ್ಬಿ ಅಂಗದ ರೋಗದಿಂದ ಉಂಟಾಗುತ್ತದೆ. ಇಂಥವರು ಸಾಧಾರಣ ವಾಗಿ ದೊಡ್ಡ ಶಬ್ದಗಳಿಗೆ ಅಸಹನೆ ತೋರುತ್ತಾರೆ.

3) ನರದ ಕಿವುಡು : ಅದು ಶ್ರವಣ ನರದ ದೌರ್ಬಲ್ಯದಿಂದಾ ಗುತ್ತದೆ. ಈ ರೋಗಿಗಳು ದೊಡ್ಡ ಧ್ವನಿಯಲ್ಲಿ ಮಾತನಾಡುತ್ತಾರೆ. ಬೇರೆಯವರ ಮಾತುಗಳನ್ನು ಬೇಗನೆ ಗ್ರಹಿಸಲಾರರು.

4) ಮಿಶ್ರ ಕಿವುಡು : ಮೇಲೆ ಹೇಳಿದ 1, 2, ಮತ್ತು 3 ವಿಧಗಳೂ ಒಟ್ಟಾಗಿರುವುದು.

5) ಮಾನಸಿಕ ಕಿವುಡು : ಇದರಲ್ಲಿ ಎರಡು ವಿಧಗಳಿವೆ.

ಅ) ಕಿವುಡನಂತೆ ನಟನೆ ಮಾಡುವುದು.

ಆ) ಉನ್ಮಾದದ ಕಿವುಡು - ಇಂಥವರ ವ್ಯಕ್ತಿತ್ವದಲ್ಲೂ ಮಾರ್ಪಾಡು ಇರುತ್ತದೆ.

ಕಿವುಡಿನ ವಿಧಗಳನ್ನು ಕಂಡು ಹಿಡಿಯುವದಕ್ಕೂ ಮತ್ತು ಅಳತೆ ಮಾಡುವುದಕ್ಕೂ ಶ್ರವಣಮಾಪಕ ಯಂತ್ರಗಳನ್ನು ಉಪ ಯೋಗಿಸುತ್ತಾರೆ. 70 Decibels (ಶ್ರವ್ಯ ಶಬ್ದದ ತೀವ್ರತೆಯ

ಒಂದೂ ಮಾನುಗಿಂತ ಜಾಸ್ತಿ ಕಿವುಡಿದ್ದರೆ ಅಂತಹವರನ್ನು ಕಿವುಡರೆಂದು ಪರಿಗಣಿಸುತ್ತಾರೆ. ಇವರು ದಿನಬಳಕೆಯಲ್ಲಿ ಅನಾನುಕೂಲರಾಗಿರುತ್ತಾರೆ.

**ಮಕ್ಕಳಲ್ಲಿ ಕಿವುಡು** : ಇದು ನಾನು ಕಾರಣಗಳಿಂದ ಉಂಟಾಗುತ್ತದೆ.

1) **ಅನುವಂಶಿಕ ಕಿವುಡು** : ಇದು ಜನಿಕಗಳ (Genes) ಮೂಲಕ ಬರುವುದು. ಕಿವುಡರು ಕಿವುಡರನ್ನೇ ಮದುವೆಯಾಗುವುದು ಇದಕ್ಕೆ ಕಾರಣ. ಸಗೋತ್ರ ಮದುವೆ ಮತ್ತು ರಕ್ತ ಸಂಬಂಧದಲ್ಲಿ ಮದುವೆ ಮಾಡಿಕೊಂಡರೆ ಹುಟ್ಟುವ ಮಕ್ಕಳಲ್ಲಿ ಕಿವುಡುತನ ಬರುವುದು ಜಾಸ್ತಿ.

2) ಮಗುವು ಗರ್ಭಕೋಶದಲ್ಲಿರುವಾಗ ತಾಯಿಗೆ ಬರುವ ದಡಾರ, ಇನ್‌ಫ್ಲೂಯಂಜಾ, ಆರ್. ಎಚ್. ಅಸಮಂಜಸತೆ ಈ ಕಾರಣಗಳಿಂದಲೂ ಹುಟ್ಟಿದ ಮಗು ಕಿವುಡಾಗಿರಬಹುದು.

3) ಹೆರಿಗೆಯ ಸಮಯದಲ್ಲಿ ಶಿಶುವಿಗೆ ಆಮ್ಲಜನಕದ ಕೊರತೆಯಿರುವುದು, ಪೆಟ್ಟು ಬೀಳುವುದು ಈ ಕಾರಣಗಳಿಂದಲೂ ಮಗುವು ಕಿವುಡಾಗಿರಬಹುದು.

4) ಒಂದು ವರುಷದೊಳಗೆ ಸನ್ನಿ, ದಾರ, ಸಿಡುಬು, ಮಿದುಳಿನ ಉರಿಯೂತ ಈ ಕಾಯಿಲೆಗಳಿಂದಲೂ ಮಗುವು ಕಿವುಡಾಗಿರಬಹುದು.

.ಮಕ್ಕಳಿಗೆ ಸರಿಯಾಗಿ ಕಿವಿ ಕೇಳಿಸದಿದ್ದರೆ ಮಾತು ಬರುವುದೂ ತಡವಾಗುತ್ತದೆ ಪೂರ್ಣ ಕಿವುಡಿದ್ದರೆ ಮಾತೇ ಬರುವುದಿಲ್ಲ. ಆದ್ದರಿಂದ ಮಗುವಿಗೆ ಮಾತು ಬರುವುದು ತಡವಾದರೆ ತಜ್ಞರಿಂದ ಪರೀಕ್ಷೆ ಮಾಡಿಸಬೇಕು. 9 ತಿಂಗಳಿನ ಮಗು ಶಬ್ದ ಮಾಡಿದರೆ ಅದು ಎಲ್ಲಿಂದ ಎಂದು ಗ್ರಹಿಸಬೇಕು. ಒಂದರಿಂದ ಎರಡು ವರ್ಷದ ಮಕ್ಕಳು ಹೇಳಿದ್ದನ್ನು ಅರ್ಥ ಮಾಡಿಕೊಂಡು ಅದರ ಅನುಕರಣೆ ಮಾಡಿ ಮಾತನಾಡಬೇಕು. ಮತ್ತು ಮಾತನಾಡುವಾಗ ಶಬ್ದಗಳನ್ನು ಜೋಡಿಸಬೇಕು. ಹೀಗೆ ಮಾಡದಿದ್ದಲ್ಲಿ ಮಗುವಿಗೆ ಕಿವಿ ಕೇಳಿಸುವುದಿಲ್ಲವೆನ್ನುವ ಅನುಮಾನ ಬರಬೇಕು.

ಇಂತಹ ಮಕ್ಕಳನ್ನು ತಜ್ಞರಿಂದ ಪರೀಕ್ಷೆ ಮಾಡಿಸಿ ಕಿವುಡು ಖಚಿತ ಪಡಿಸಿಕೊಳ್ಳಬೇಕು. ಶ್ರವಣ ಸಾಧನಗಳನ್ನು ಕೊಟ್ಟು ಮಗುವು ಇದನ್ನು ಯಾವಾಗಲೂ ಉಪಯೋಗಿಸುವ ರೀತಿಯಲ್ಲಿ ನೋಡಿಕೊಳ್ಳಬೇಕು. ಕಿವುಡು, ದಡ್ಡರೆಂದು ಅಸಡ್ಡೆ ಮಾಡದೆ, ಕಿವುಡು ಮಗುವಿಗೆ ಮೊದಲಿನಿಂದಲೂ ಕೇಳುವ ಮತ್ತು ಮಾತನಾಡುವ ಅವಕಾಶವನ್ನು ಹೆಚ್ಚು ಹೆಚ್ಚಾಗಿ ಒದಗಿಸಬೇಕು. ಎಷ್ಟೆ ಎಳೆತನದಲ್ಲಿ ಶಿಕ್ಷಣ ಮೊದಲಾದರೆ ಅಷ್ಟು ಒಳ್ಳೆಯದು. ಈ ದಿಕ್ಕಿನಲ್ಲಿ ತಂದೆ ತಾಯಿಯರ ಪಾತ್ರವಂತೂ ಅತಿ ಮುಖ್ಯ. ಹೀಗೆ ವೈದ್ಯ ಮತ್ತು ವಿಜ್ಞಾನ ಶಾಸ್ತ್ರದ ಉಪಯೋಗವನ್ನು ಪಡೆದು ಮಕ್ಕಳಿಗೆ ಮಾತನಾಡುವುದನ್ನು ಕಲಿಸಬೇಕೇ ವಿನಹ ಅವರನ್ನು ಅಲಕ್ಷಿಸಬಾರದು. ದೇವರೊಬ್ಬನ ಮೇಲೆ ನಂಬಿಕೆ ಹಾಕದೆ ಸ್ವಪ್ರಯತ್ನವನ್ನೂ ಮಾಡಬೇಕು.

**ವಯಸ್ಕರಲ್ಲಿ ಕಿವುಡು :** 1) ದಡಾರ, ಮಂಗಬಾವು ಇನ್‌ಫ್ಲೂಯಂಜಾ, ಮಿದುಳಿನ ಹೊರಪದರುಗಳ ಉರಿಯೂತ, ನಡುಗಿವಿಯ ಉರಿಯೂತ, ಚೂಚು ಕಂದದ ಕುಹರದ ಉರಿಯೂತ (ಮ್ಯಾಸ್ಟಾಯಿಡೈಟಿಸ್) ಇವುಗಳಿಂದ ಕಿವುಡು ಸಂಭವಿಸಬಹುದು.

2) ಕೆಲವು ಔಷಧಗಳ ಸೇವನೆ ವಿಷವಾಗಿ ಪರಿಣಮಿಸಿ ಒಳಗಿವಿಯ ನರಜೀವಕೋಶಗಳ ನಾಶಕ್ಕೆ ಕಾರಣವಾಗಿ ಕಿವುಡು ಸಂಭವಿಸಬಹುದು. ಉದಾ: ಸ್ಟ್ರೆಪ್ಟೋಮೈಸಿನ್ ಸಲ್ಫೇಟ್ (ಕ್ಷಯ ರೋಗ ಚಿಕಿತ್ಸಾ ಔಷಧ) ಈ ಔಷಧಗಳಿಂದ ಚಿಕಿತ್ಸೆ ಪಡೆಯುವಾಗ ಜಾಗರೂಕತೆ ವಹಿಸಬೇಕು.

**2) ಮಾನಸಿಕ :** ಮೊದಲನೆ ಮಹಾಯುದ್ಧದ ಸಮಯದಲ್ಲಿ ಈ ಕಿವುಡನ್ನು ಗಮನಿಸಲಾಯಿತು. ಉದ್ರೇಕಾಘಾತ ಈ ಸ್ಥಿತಿಗೆ ಕಾರಣ. ಶ್ರವಣಾಂಗಗಳಲ್ಲಿ ಯಾವ ರೋಗವಾಗಲೀ, ಮಾರ್ಪಾಡಾಗಲೀ ಕಾಣುವುದಿಲ್ಲ. ಉದಾ: ರಣರಂಗದಲ್ಲಿರುವ ತನ್ನ ಪತಿಯ ಮರಣವಾರ್ತೆಯನ್ನು ಅನಿರೀಕ್ಷಿತವಾಗಿ ಕೇಳಿದ ಸತಿಗೆ ಈ ಕಿವುಡು ಬರಬಹುದು. ಆ ಸೈನಿಕರು ತಮ್ಮ ಕೆಲಸ ತಪ್ಪಿಸಿಕೊಳ್ಳಲು ಕಿವುಡರಂತೆ ನಟಿಸಬಹುದು.

4) **ರಿಕಾಪು ಮೂಳೆ ಗಟ್ಟಿಯಾಗುವುದು (ಓಟೋಸ್ಕ್ಲಿರೋಸಿಸ್) :** ರಿಕಾಪುಮೂಳೆ (ಸ್ಟಾಪಿಸ್) ಗಟ್ಟಿಯಾಗುವುದರಿಂದ, ಸಾಮಾನ್ಯವಾಗಿ ಯುವಕ ಯುವತಿಯರಲ್ಲಿ ಶ್ರವಣ ಶಕ್ತಿಗೆ ತೊಂದರೆಯುಂಟಾಗುತ್ತದೆ. ಇದು ಎರಡೂ ಕಿವಿಗಳಲ್ಲಿ ನಿಧಾನವಾಗಿ ಹೆಚ್ಚುತ್ತಾ ಹೋಗುವುದು. ಈ ಕಾಯಿಲೆವುಳ್ಳವರು ಗರ್ಭಿಣಿ

ಯರಾದಾಗ ಕಿವುಡು ಹೆಚ್ಚಾಗುವುದು. ರಿಕಾಪು ಮೂಳೆ ಹೆಚ್ಚು ಹೆಚ್ಚು ಗಟ್ಟಿಯಾದಂತೆಲ್ಲಾ ಶ್ರವಣ ಶಕ್ತಿಯೂ ಕುಂದುತ್ತಾ ಹೋಗುತ್ತದೆ. ಔಷಧಿಗಳಿಂದ ಇದರ ಚಿಕಿತ್ಸೆ ಸಾಧ್ಯವಿಲ್ಲ. ಶಸ್ತ್ರಚಿಕಿತ್ಸೆಯಿಂದ ಶ್ರವಣ ಶಕ್ತಿಯನ್ನು ಉತ್ತಮಗೊಳಿಸುವ ಸಾಧ್ಯತೆ ಇದೆ. ಶಸ್ತ್ರ ಚಿಕಿತ್ಸೆ ಬೇಡವೆನ್ನುವವರು ಶ್ರವಣ ಯಂತ್ರಗಳನ್ನು ಉಪಯೋಗಿಸಬಹುದು. ಈಚೀಚೆಗೆ ಈ ಕಾಯಿಲೆ ಹೆಚ್ಚು ಹೆಚ್ಚಾಗಿ ಗೋಚರಿಸುತ್ತಲಿದೆ.

5) ಮಿನಿಯರ್ಸ್‌ನ ಕಾಯಿಲೆ : ಫ್ರೆಂಚ್ ವೈದ್ಯನಾಗಿದ್ದ ಮಿನಿಯರ್‌ನಿಂದ ಈ ಹೆಸರು ಬಂದಿದೆ. ತಲೆ ಸುತ್ತುವುದು. ಕಿವಿ ಗುಂಯೆನ್ನುವುದು ಮತ್ತು ಕಿವುಡು, ಇವು ಮರಳಿ ಮರಳಿ ಕಾಡುವುದೇ ಈ ರೋಗದ ಲಕ್ಷಣ. ಪ್ರತಿ ಸಲ ತಲೆಸುತ್ತು ಬಂದಾಗ ಕಿವುಡು ಮತ್ತು ಕಿವಿ ಗುಂಯೆನ್ನುವುದು ಹೆಚ್ಚುತ್ತಾ ಹೋಗುತ್ತದೆ. ಕಿವಿ ಗುಂಯೆನ್ನುವುದರಿಂದ ರೋಗಿಗೆ ಹುಚ್ಚು ಹಿಡಿದಂತಾಗಬಹುದು. ಕೆಲವರು ತಪ್ಪು ಕೇಳಿಸುವುದರಿಂದ ಘಾಸಿಪಡುತ್ತಾರೆ. ಒಳಗಿವಿಯ ಹಾಲ್ರಸ ಹೆಚ್ಚುವುದರಿಂದ ಈ ರೋಗ ಬರುತ್ತದೆ. ಇದು ಗಂಡಸರಲ್ಲಿ ಹೆಚ್ಚು. ಉಪ್ಪು ಮತ್ತು ನೀರಿನ ಸೇವನೆ ಕಡಿಮೆ ಮಾಡುವುದರಿಂದ ರೋಗದ ದಾಳಿಗಳನ್ನು ಹತೋಟಿಗೆ ತರಬಹುದು. ಶಾಮಕ ಮದ್ದುಗಳಿಂದ ಕಿವಿ ಗುಂಯೆನ್ನುವುದು ಕಡಿಮೆಯಾಗುತ್ತದೆ. ಮಿತಿಮೀರಿದ ಸ್ಥಿತಿಯಲ್ಲಿ ಶಸ್ತ್ರಕ್ರಿಯೆಯಿಂದ ಅಥವಾ ಶಬ್ದಾತೀತ ಅಲೆಗಳಿಂದ ಒಳಗಿವಿಯನ್ನು ನಾಶಮಾಡಬೇಕಾಗುತ್ತದೆ.

6) ಕೈಗಾರಿಕೋದ್ಯಮಿಗಳಲ್ಲಿ ಕಿವುಡು : ಕೈಗಾರಿಕೆಗಳಲ್ಲಿ ಕೆಲಸ ಮಾಡುವವರು ಹಲವಾರು ವರ್ಷ ಒಂದೇ ಶಬ್ದವನ್ನು ಎಡೆಬಿಡದೆ ಕೇಳುತ್ತಿರುವುದರಿಂದ ಆ ಶಬ್ದದ ಶ್ರವಣೇಂದ್ರಿಯ ಭಾಗಗಳು ನಾಶವಾಗುತ್ತವೆ. ಈಚೀಚೆಗೆ ಈ ಸಮಸ್ಯೆ ಆರೋಗ್ಯಾಧಿಕಾರಿಗಳ ಗಮನವನ್ನು ಎರಡು ಕಾರಣಗಳಿಂದ ಸೆಳೆದಿದೆ. ಕೈಗಾರಿಕೆಗಳಲ್ಲಿ ಹೆಚ್ಚಾಗುತ್ತಿರುವ ಸಪ್ಪಳ ಮತ್ತು ಪರಿಹಾರಧನಕ್ಕೆ ಕೆಲಸಗಾರರಿಂದ ಹೆಚ್ಚುತ್ತಿರುವ ಬೇಡಿಕೆಗಳು. ಇಂತಹ ಕಡೆಗಳಲ್ಲಿ ಕೆಲಸಮಾಡುವವರು ಕಿವಿಯಲ್ಲಿ ಹತ್ತಿಯನ್ನು ಇಟ್ಟುಕೊಳ್ಳಬೇಕು. ಮೇಲಿಂದ ಮೇಲೆ ಕಿವಿಯ ಪರೀಕ್ಷೆಯನ್ನು ಮಾಡಿಸಿಕೊಂಡು ಕಿವಿಗೆ ಪೆಟ್ಟು ಬೀಳುವ ಚಿಹ್ನೆಗಳು ಕಂಡಾಗ ಉದ್ಯೋಗವನ್ನು ಬದಲಾಯಿಸಬೇಕು.

7) ಮೇಹರೋಗ : ದೊಡ್ಡವರಾದ ಮೇಲೆ ಮೇಹ ಅಂಟಿಸಿಕೊಂಡವರಲ್ಲಿ ಎರಡನೆಯ ಹಂತದಲ್ಲಿ (ಸೆಕೆಂಡರಿ ಸ್ಟೇಜ್ ಆಫ್ ಸಿಫಿಲಿಸ್) ನಡುಗಿವಿಯ ಉರಿಯೂತ ಹಾಗೂ ಕಡೆಯ ಹಂತದಲ್ಲಿ ಒಳಗಿವಿಯ ನರದ ಉರಿಯೂತವುಂಟಾಗಿ ಕಿವಿಕೂಗು, ತಲೆ ಸುತ್ತು ಹಾಗೂ ಕಿವುಡು ಆಗಾಗ್ಗೆ ಕಾಣಿಸಿಕೊಳ್ಳುವದು. ಮೇಹರೋಗಿಗಳಿಗೆ ಕೊಡುವ ಚಿಕಿತ್ಸೆಯೇ ಈ ರೋಗಿಗಳಿಗೂ ಅನ್ವಯಿಸುತ್ತದೆ. ಮೇಹ ರೋಗ ಅಂಟಿದ ಕೂಡಲೇ ಸರಿಯಾದ ಚಿಕಿತ್ಸೆ ಮಾಡಿಸುವುದರಿಂದ ಕಿವಿಯ ಮೇಹವನ್ನು ತಡೆಗಟ್ಟಬಹುದು.

8) ಮುಪ್ಪಿನಲ್ಲಿ ಕಿವುಡು : ವಯಸ್ಸಾದಂತೆಲ್ಲಾ ಕಿವಿ ಮಾಂದ್ಯ ಅಭಿವೃದ್ಧಿಗೊಳ್ಳುವುದು. ಮುಪ್ಪಿನಲ್ಲಿ ಕಿವುಡು ಸಹಜ. ಮುಪ್ಪಿ

ನಿಂದ ಒಳಗಿವಿಯ ಕಾರ್ಟಿಯ ಅಂಗ ನಶಿಸುವುದು. ರಕ್ತನಾಳಗಳು ದಪ್ಪನಾಗಿ ರಕ್ತಚಲನೆ ಕಡಿಮೆಯಾಗುವುದು ಕಾರ್ಟಿಯ ಅಂಗ ನಶಿಸುವುದಕ್ಕೆ ಕಾರಣ. ರಕ್ತದ ಒತ್ತಡವಿರುವ ರೋಗಿಗಳಿಗೆ ಕೆಲವೊಮ್ಮೆ ಕಿವಿಯ ಸಣ್ಣ ರಕ್ತನಾಳಗಳಲ್ಲಿ ಸ್ರಾವವುಂಟಾಗಿ ಕಿವುಡು ಬರಬಹುದು. ಇವುಗಳಲ್ಲದೆ ವಯಸ್ಸಾದವರಲ್ಲಿ ಗ್ರಹಣಶಕ್ತಿ ಕಡಿಮೆಯಾಗುವುದರಿಂದ ಕೇಳಿಸುವುದು ಕಮ್ಮಿಯಾದಂತೆ ಅನಿಸುವುದು. ಇಂತಹ ಕಿವುಡನ್ನು ಔಷಧೋಪಚಾರಗಳಿಂದ ಸರಿಪಡಿಸಲಿಕ್ಕಾಗುವುದಿಲ್ಲ. ತೀವ್ರವಾಗಿ ನಶಿಸುತ್ತಿರುವ ಕಣಜಾಲಗಳನ್ನು ತಡೆಗಟ್ಟುವುದಕ್ಕೆ ಜೀವಸತ್ವವು ಕೆಲವೊಮ್ಮೆ ಸಹಾಯಮಾಡುತ್ತದೆ. ಶ್ರವಣಯಂತ್ರಗಳೂ ಕೂಡ ಎಲ್ಲರಲ್ಲೂ ಉಪಯೋಗಕ್ಕೆ ಬರುವುದಿಲ್ಲ.

## ಶ್ರವಣ ಯಂತ್ರಗಳು

ಶ್ರವಣ ಯಂತ್ರಗಳ ವಿಚಾರದಲ್ಲಿ ಒಂದು ಮಾತು. ಇವು ಮಾನವನ ಹೆಮ್ಮೆಯ ವೈಜ್ಞಾನಿಕ ಸಾಧನೆ. ಇವುಗಳಲ್ಲಿ ಉಪಯೋಗಿಸುವುದರಿಂದ ನಾವು ಮಾತನಾಡುವ ಶಬ್ದಗಳು 8 ರಿಂದ 10 ಪಟ್ಟು ಹೆಚ್ಚಾಗಿ ಕೇಳಿಸುತ್ತವೆ. ಟ್ರಾನ್ಸಿಸ್ಟರ್ ಯಾಂತ್ರಿಕ ಜ್ಞಾನದ ಪ್ರಗತಿಯಿಂದ ಈಗ ನಮಗೆ ಅಟೋಮ್ಯಾಟಿಕ್ ವಾಲ್ಯೂಂ ಕಂಟ್ರೋಲ್ ತನಗೆ ತಾನೇ ಶಬ್ದದ ಸಲೆಗಳನ್ನು ನಿಗ್ರಹಿಸುವುದು ಮುಂತಾದ ಅನುಕೂಲ ಸಾಧನಗಳು ಸಿಕ್ಕಿವೆ. ಮೊದಲಿಗೆ ಈ ಯಂತ್ರಗಳು ದೊಡ್ಡವಾಗಿದ್ದವು. ಹಾಗೂ ದುಬಾರಿಯಾಗಿದ್ದವು. ಈಗ ಅವುಗಳ ಗಾತ್ರವೂ ಕಡಿಮೆಯಾಗಿ ಕನ್ನಡಕಗಳನ್ನು ಜನರು ಒಪ್ಪುವಷ್ಟು ಇವನ್ನು ಒಪ್ಪುವಂತಾಗಿವೆ. ಈಗ ಈ ಯಂತ್ರಗಳು

ಸಾಮಾನ್ಯ ರೇಡಿಯೋ ಬೆಲೆಗೆ ಸಿಕ್ಕುತ್ತವೆ. ಕಿವುಡಾದ ಮಕ್ಕಳೂ ಮತ್ತು ಇನ್ನೂ ಇತರ ತರದ ಕಿವುಡರೂ ಈ ಶ್ರವಣ ಯಂತ್ರಗಳಿಂದ ಬಹಳಷ್ಟು ಪ್ರಯೋಜನ ಪಡೆಯಬಹುದು.

# ಅಧ್ಯಾಯ - 3
# ಮೂಗಿನ ಕಾಯಿಲೆಗಳು

ಮೂಗು ಮನುಷ್ಯನಲ್ಲಿ ಮತ್ತು ಪ್ರಾಣಿಗಳಲ್ಲಿ ಇರುವ ಘ್ರಾಣೇಂದ್ರಿಯ. ಇದು ಪಂಚೇಂದ್ರಿಯಗಳಲ್ಲಿ ಒಂದು. ಸೇವಿಸಿದ ಗಾಳಿಯನ್ನು ಶುದ್ಧಿಗೊಳಿಸುವುದಲ್ಲದೆ, ಉಷ್ಣ ನಿಯಂತ್ರಕವಾಗಿಯೂ ಕೆಲಸಮಾಡುತ್ತದೆ. ಮೂಗಿಗೆ ಯಾವುದೇ ಬಗೆಯ ರೋಗ ಉಂಟಾದಲ್ಲಿ ಮುಖ್ಯವಾಗಿ ಉಸಿರಾಡಲು ತೊಂದರೆಯಾಗುತ್ತದೆ.

## (ಅ) ನೆಗಡಿ

ಹಿಂದಿನ ಕಾಲದವರು ಹೇಳುವ ಗಾದೆಮಾತು ಅಕ್ಷರಶಃ ಸತ್ಯ. ''ನೆಗಡಿಯಂತಹ ಕಾಯಿಲೆಯಿಲ್ಲ, ಜಗುಡಿಯಂತಹ ಓಡವೆ ಇಲ್ಲ ''. ಈ ರೋಗವನ್ನು ತಡೆಗಟ್ಟುವ ಧೀರ ಇನ್ನೂ ಹುಟ್ಟಿಲ್ಲ, ಮತ್ತು ಈ ರೋಗವು ಯಾರನ್ನೂ ಬಿಟ್ಟಿಲ್ಲ. ಇದು ವಿಷಾಣುಗಳಿಂದ ಬರುತ್ತದೆ, ಹಾಗೂ ಬಹಳ ಬೇಗ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ. ಈ ರೋಗದ ಮೊದಲ ಲಕ್ಷಣಗಳೆಂದರೆ ಮೂಗಿನ ಮತ್ತು ಮೇಲ್ಪದರಗಳಲ್ಲಿ ಉರಿ, ಹುಟ್ಟು ಮತ್ತು ಹಣೆಗಳಲ್ಲಿ ಬಿಗಿತ. ಕೈಕಾಲು ಮತ್ತು ಮೈಯಲ್ಲಿ ನೋವು. ಯಾವದೇ ಬಗೆಯ ಕೆಲಸ ಮಾಡುವುದಕ್ಕೂ ಬೇಸರ. ಕೆಲವರಿಗೆ ಇದೇ ಸಮಯದಲ್ಲಿ ಮೈ ಬೆಚ್ಚಗೂ ಆಗಬಹುದು. ಒಂದೆರಡು ದಿನಗಳಲ್ಲಿ ಮೂಗಿನಲ್ಲಿ ಸೋರುವುದು, ಗಂಟಲಿನಲ್ಲಿ ಉರಿ, ತುರಿಕೆ ಮತ್ತು ಕೆಮ್ಮು ಬರುವುದು. 6-7 ದಿನಗಳ ನಂತರ ಇವೆಲ್ಲವೂ ತನಗೆ ತಾನೇ ಕಡಿಮೆ

ಯಾಗುವುದು. ಮೊದಲಿನ ಲಕ್ಷಣಗಳು ಕಂಡಾಗಲೇ ರೋಗಿಯು ಪೂರ್ಣ ವಿಶ್ರಾಂತಿ ತೆಗೆದುಕೊಳ್ಳಬೇಕು. ನೋವು ಕಮ್ಮಿಯಾಗುವುದಕ್ಕೆ ಮತ್ತು ರೋಗ ಉಲ್ಬಣವಾಗುವುದನ್ನು ತಡೆಯುವುದಕ್ಕೆ ಔಷಧಿ ತೆಗೆದುಕೊಳ್ಳಬೇಕು. ಬಿಸಿನೀರಿನಲ್ಲಿ ಬೆಂಜಾಯಿನ್ ಹಾಕಿ ಹೊಗೆ ತೆಗೆದುಕೊಳ್ಳಬೇಕು. ಇದರಿಂದ ಮುಖದ ನೋವು ಕಡಿಮೆಯಾಗಿ ಸರಳವಾಗಿ ಉಸಿರಾಡಲು ಅನುಕೂಲವಾಗುತ್ತದೆ. ಮೂಗು ಕಟ್ಟಿ ಉಸಿರಾಟಕ್ಕೆ ತೊಂದರೆಯಾದಾಗ ಮೂಗಿನಲ್ಲಿ ಕೆಲವೊಂದು ಔಷಧಗಳನ್ನು (ನೇಸಲ್ ಡ್ರಾಪ್ಸ್) ಉಪಯೋಗಿಸಬೇಕು. ಪದೇ ಪದೇ ಉಪಯೋಗಿಸುವುದರಿಂದ ಮೂಗಿನ ಲೋಳ್ಪರೆಯು ಉಬ್ಬಿಕೊಂಡು ಇಂತಹ ಔಷಧಗಳಿಂದ ಅನುಕೂಲವಾಗುವುದಕ್ಕಿಂತಲೂ ಅನಾನುಕೂಲವೇ ಹೆಚ್ಚಾಗುತ್ತದೆ. ಇದರಿಂದ ಮೂಗಿನಲ್ಲಿ ಹಾಕುವ ಔಷಧಗಳನ್ನು ಹೆಚ್ಚಾಗಿ ಉಪಯೋಗಿಸಬಾರದು. ಅತಿ ಯಾವುದರಲ್ಲೂ ಹಿತವಲ್ಲ, ಅಲ್ಲವೇ?

### (ಆ) ಪಿನಸಿ ಅಥವಾ ಹೆಕ್ಕಳಿಕೆ ರೋಗ

ಈ ರೋಗ ನಮ್ಮ ಪ್ರಾಂತದಲ್ಲಿ ಅದರಲ್ಲೂ ಧಾರವಾಡ, ಬೆಳಗಾಂವಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಇದೆ. ಗಂಡಸರೂ, ಹೆಂಗಸರೂ ಸಮ ಸಮವಾಗಿ ಈ ರೋಗಕ್ಕೆ ತುತ್ತಾಗುತ್ತಾರೆ. ಅನೇಕ ವೇಳೆ ಮಕ್ಕಳಿಗೂ ಈ ರೋಗ ಬರುತ್ತದೆ. ಮೂಗೊಂದೇ ಅಲ್ಲದೆ ಗಂಟಲು ಮತ್ತು ಧ್ವನಿ ಪೆಟ್ಟಿಗೆಗೂ ಈ ರೋಗ ಬರಬಹುದು. ಇದರ ಮುಖ್ಯ ಲಕ್ಷಣಗಳೆಂದರೆ ಮೂಗಿನಿಂದ ದುರ್ನಾತ, ಹಿಕ್ಕೆ ಬೀಳುವುದು ಮತ್ತು ಹಿಕ್ಕನ್ನು ತೆಗೆಯುವಾಗ ರಕ್ತ ಬೀಳುವುದು.

ರೋಗಗ್ರಸ್ತರಾಗಿರುವವರಿಗೆ ವಾಸನೆ ತಿಳಿಯುವುದಿಲ್ಲ. ಆದರೆ ಅವರ ಸುತ್ತಮುತ್ತ ಇರುವವರಿಗೆ ಇದು ಕೆಲಸಮಯ ಸಹಿಸಲಾರದಂತಹ ವಾಸನೆ ಬಂದು ಈ ರೋಗಿಗಳನ್ನು ದೂರವಿಡುತ್ತಾರೆ. ಇನ್ನೂ ಕೆಲವು ರೋಗಿಗಳಿಗೆ ಹುಳ ಬೀಳುವುದೂ ಉಂಟು. ಈ ರೋಗವನ್ನು ತಡೆಗಟ್ಟುವುದಕ್ಕೆ ಕೆಳಗೆ ತಿಳಿಸಿದ ಮೂರು ಬಗೆಯ ಎಚ್ಚರಿಕೆಗಳು ಅವಶ್ಯ; 1) ಚಿಕ್ಕವಯಸ್ಸಿನಲ್ಲಿ ಮೂಗಿನ ರೋಗಗಳನ್ನು ಅಲಕ್ಷ್ಯಮಾಡಬಾರದು. 2) ಮೂಗನ್ನು ಯಾವಾಗಲೂ ಸ್ವಚ್ಛವಾಗಿರಿಸಬೇಕು. 3) ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಬೇಕು. ವಾಸನೆ ಬರದಂತೆ ಮಾಡಬೇಕಾದರೆ ಮೂಗನ್ನು ಈ ಕೆಳಗೆ ತಿಳಿಸಿದಂತೆ ದಿವಸಕ್ಕೆ 3-4 ಸಲ ತೊಳೆದುಕೊಳ್ಳಬೇಕು. ಒಂದು ಚೊಂಬು ಕಾದಾರಿದ ನೀರಿಗೆ ಒಂದು ಚಿಟಿಕೆ ತಿನ್ನುವ ಸೋಡ, ಒಂದು ಚಿಟಿಕೆ ಸಕ್ಕರೆ, ಒಂದು ಚಿಟಿಕೆ ಉಪ್ಪುಹಾಕಿ ಚೆನ್ನಾಗಿ ಕರಗುವಂತೆ ಕಲೆಸಬೇಕು. ಈ ನೀರನ್ನು ಬೊಗಸೆಯಲ್ಲಿ ಹಾಕಿಕೊಂಡು ಮೂಗಿನಲ್ಲಿ ಏರಿಸಿದಾಗ, ನೀರು ಮೂಗಿನ ಒಳ ಭಾಗವನ್ನೆಲ್ಲಾ ತೊಳೆದುಕೊಂಡು ಗಂಟಲಿಗೆ ಬರುತ್ತದೆ. ಅದನ್ನು ಉಗುಳಬೇಕು. ಈ ರೀತಿ ಮೂಗನ್ನು ತೊಳೆದುಕೊಳ್ಳುವುದಕ್ಕಿಂತ ಮುಂಚಿತವಾಗಿ ಪ್ರತಿಶತ 25 ಗ್ಲುಕೋಸ್ ಸಕ್ಕರೆಯನ್ನು ಗ್ಲಿಸರಿನ್‌ನಲ್ಲಿ ಹಾಕಿ ಕಲಸಿದ ಮಿಶ್ರಣವನ್ನು ಮೂಗಿನ ಎರಡೂ ಹೊಳ್ಳೆಗಳಿಗೆ ಬಿಟ್ಟುಕೊಳ್ಳಬೇಕು. ಇದರಿಂದ ಹಿಕ್ಕುಳೆಲ್ಲಾ ಮೆದುವಾಗುತ್ತವೆ. ರಾತ್ರಿ ಮಲಗುವಾಗ ಸೊಳ್ಳೆಪರದೆಯನ್ನು ತಪ್ಪದೆ ಕಟ್ಟಿಕೊಳ್ಳಬೇಕು. ಇಂತಹ ರೋಗಿಗಳು ದನಗಳನ್ನು ಕಟ್ಟುವ ಜಾಗದಲ್ಲಿ, ಗಂಜಳ ಬೀಳುವ

ಜಾಗದಲ್ಲಿ ಮಲಗಬಾರದು. ಈ ಬಗೆಯ ಎಚ್ಚರಿಕೆ ವಹಿಸುವುದರಿಂದ ಮೂಗಿನಲ್ಲಿ ಹುಳ ಬೀಳುವುದಿಲ್ಲ. ಈ ಮೇಲೆ ಹೇಳಿದ ರೀತಿಯಲ್ಲಿ ಔಷಧೋಪಚಾರ ಮಾಡಿದಾಗ್ಯೂ ಕಡಿಮೆ ಆಗದವರಿಗೆ ಚುಚ್ಚುಮದ್ದು ಮತ್ತು ಶಸ್ತ್ರಚಿಕಿತ್ಸೆ ಮಾಡಿ ಗುಣಪಡಿಸಬಹುದು.

## (ಇ) ಗಡಸು ರೋಗ

ಈ ಕಾಯಿಲೆಯನ್ನು 1870 ರಲ್ಲಿ ಹೀಬ್ರಾ ಎಂಬಾತನು ಮೊಟ್ಟಮೊದಲಿಗೆ ವರ್ಣಿಸಿದನು. ಮೂಗಷ್ಟೇ ಅಲ್ಲದೆ ಗಂಟಲು, ಧ್ವನಿಪೆಟ್ಟಿಗೆ, ಮತ್ತಿತರ ಕಡೆಗೂ ಈ ರೋಗ ತಗುಲಬಹುದು. ಈ ಕಾಯಿಲೆ ಪ್ರಪಂಚದ ಬೇರೆ ಬೇರೆ ಕಡೆಗೂ ಕಂಡುಬಂದಿದೆ. ನಮ್ಮ ದೇಶದಲ್ಲಿ ಒರಿಸ್ಸಾ, ಉತ್ತರಪ್ರದೇಶ, ರಾಜಸ್ಥಾನ, ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿದೆ. ಕರ್ನಾಟಕ ರಾಜ್ಯದಲ್ಲಿ ಧಾರವಾಡ, ಬಿಜಾಪುರ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಬಹಳಷ್ಟು ಇದೆ. ಈ ರೋಗವು ಗಂಡಸರು ಮತ್ತು ಹೆಂಗಸರಲ್ಲಿ ಸರಿಸಮವಾಗಿ ಕಾಣಿಸುತ್ತದೆ. ಗಡಸು ರೋಗಗ್ರಸ್ತರಲ್ಲಿ ನಡುವಯಸ್ಕರೇ ಹೆಚ್ಚು (20 ರಿಂದ 30 ವರ್ಷ). ಈ ರೋಗದಲ್ಲಿ ನಾಲ್ಕು ಹಂತಗಳಿವೆ. 1) ನೆಗಡಿಯ ಹಂತ (ಕೆಟಾರಲ್ ಸ್ಟೇಜ್) 2) ಹೆಕ್ಕಳಿಕೆಯ ಹಂತ (ಅಟ್ರೋಪಿಕ್ ಸ್ಟೇಜ್) 3) ಗಂಟಾಗುವ ಹಂತ (ಗ್ರಾನ್ಯುಲೇಶನ್ ಸ್ಟೇಜ್) 4) ಗಡಸಾಗುವ ಹಂತ (ಸಿಕ್ರೆಟ್ಟೆಶನ್ ಸ್ಟೇಜ್.

**1) ನೆಗಡಿಯ ಹಂತ :** ಈ ಸ್ಥಿತಿಯಲ್ಲಿ ಸಾಮಾನ್ಯವಾಗಿ ಬಂದ ನೆಗಡಿಯು ಬಹಳ ದಿವಸದವರೆಗೂ ಕಡಿಮೆಯಾಗುವುದಿಲ್ಲ.

ಕ್ರಮೇಣ ಓಕ್ಕು ಕಟ್ಟುವುದಕ್ಕೆ ಮೊದಲಾಗುತ್ತದೆ. ಆದರೆ ಹಕ್ಕಳಿಕೆಯ ರೋಗದಲ್ಲಿದ್ದಂತೆ ವಾಸನೆ ಇರುವುದಿಲ್ಲ. ಹಾಗೂ ಮೂಗಿನ ಹೊಳ್ಳೆಗಳು ಚಿಕ್ಕದಾಗುತ್ತಾ ಬರುತ್ತವೆ. ಮೂಗಿನ ನಡುತಿಡಿಕೆಯ ಇಕ್ಕೆಲಗಳಲ್ಲೂ, ಮೂಗಿನ ಕುಳಿಯ ನೆಲಭಾಗದಲ್ಲೂ ಸಣ್ಣ ಗಂಟುಗಳು ಕಾಣಿಸಿಕೊಳ್ಳುತ್ತವೆ. ನೀಲಿಗೆಂಪಾಗಿರುವ ಈ ಗಂಡುಗಳು ದೊಡ್ಡದಾಗುತ್ತಾ ಬಂದು ಒಂದಕ್ಕೊಂದು ಕೂಡಿಕೊಂಡು ಮೂಗಿನ ಹೊಳ್ಳೆಗಳು ಮತ್ತು ಮೂಗಿನ ಕುಳಿಗಳನ್ನು ಆಕ್ರಮಿಸಿಕೊಳ್ಳುತ್ತವೆ. (ಚಿತ್ರ 1) ಇದೇ ರೀತಿ ಬಾಯ್‌ಗಂಟಲಿನ ಪ್ರಕಾರಗಳಲ್ಲೂ ಮತ್ತು ಧ್ವನಿ ಕುಹರದಲ್ಲೂ ಗಂಟುಗಳು ಕಾಣಿಸಿಕೊಳ್ಳುತ್ತವೆ. ಈ ವೇಳೆಗೆ ಮೂಗು ಸ್ವಲ್ಪ ಗಡಸಾಗುತ್ತದೆ. ಈ ಸ್ಥಿತಿಯು 2 ರಿಂದ 3 ವರ್ಷಗಳವರೆಗೆ ಮುಂದುವರೆಯುತ್ತದೆ. ಈ ಗಡಸು ರೋಗ ಹೇಗೆ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ ಎಂಬುದೇ ಗೊತ್ತಾಗಿಲ್ಲ. ಹೀಗಾಗಿ ಈ ಕಾಯಿಲೆಯನ್ನು ತಡೆಗಟ್ಟುವುದು ಅಸಾಧ್ಯವಾಗಿದೆ. ಈ ಕಾಯಿಲೆಯ ಮೊದಲ ಹಂತಗಳಲ್ಲಿ ಚುಚ್ಚುಮದ್ದುಗಳಿಂದ ಉಲ್ಬಣಾವಸ್ಥೆಗೆ ಬರುವುದನ್ನು ತಡೆಗಟ್ಟಬಹುದು. ಹಾಗೂ ಕಾಯಿಲೆಯನ್ನು ಗುಣಪಡಿಸಬಹುದು. ಕೊನೆಯ ಹಂತಗಳಲ್ಲಿ (ಚಿತ್ರ 2) ಶಸ್ತ್ರಚಿಕಿತ್ಸೆಯಿಂದ ಗಡಸಾದ ಜಾಗವನ್ನು ತೆಗೆದುಹಾಕಬೇಕಾಗುವುದು. ಈ ಕಾಯಿಲೆಯು ನಮ್ಮ ಜಿಲ್ಲೆಗಳಲ್ಲಿ (ಧಾರವಾಡ, ಬೆಳಗಾಂವ) ಹೆಚ್ಚಾಗಿರುವುದರಿಂದ ಕಾಯಿಲೆಯ ಲಕ್ಷಣಗಳನ್ನು ತಿಳಿದುಕೊಂಡು ಪ್ರಥಮ ಹಂತದಲ್ಲೇ ಚಿಕಿತ್ಸೆ ಮಾಡಿಸಿಕೊಳ್ಳುವುದು ಒಳ್ಳೆಯದು.

## (ಈ) ಮೂಗಿನಲ್ಲಿ ರಕ್ತಸ್ರಾವ

ಮೂಗಿನಲ್ಲಿ ರಕ್ತಸ್ರಾವ ಕ್ಷುಲ್ಲಕ ಕಾರಣಗಳಿಂದ ಹಿಡಿದು ಗಂಭೀರ ಕಾಯಿಲೆಗಳ ಪರಿಣಾಮವಾಗಿ ಸಂಭವಿಸಬಹುದು. ಮೂಗಿನಲ್ಲಿ ಕೆಲಸಕ್ಕನುಗುಣವಾಗಿ ರಕ್ತಸಂಚಾರ ಜಾಸ್ತಿ ಇರುತ್ತದೆ. ಮುಖಕ್ಕೆ ಪೆಟ್ಟು ಬಿದ್ದಾಗ ಮೂಗಿಗೆ ಜಾಸ್ತಿ ಏಟು ಬೀಳುವುದರಿಂದ ಮೂಗಿನಲ್ಲಿ ರಕ್ತ ಸರ್ವೇಸಾಮಾನ್ಯವಾಗಿ ಎಲ್ಲರಲ್ಲೂ ಅಂದರೆ ಮಕ್ಕಳು, ಹುಡುಗರು, ದೊಡ್ಡವರು ಮತ್ತು ಮುದುಕರಲ್ಲಿ ಬೀಳಬಹುದು. ಮೂಗಿನಲ್ಲಿಯ ರಕ್ತಸ್ರಾವಕ್ಕೆ ಕಾರಣಗಳು ಅನೇಕ. ಮೂಗಿನ ಸ್ಥಳೀಯ ಕಾರಣಗಳಲ್ಲದೇ ದೇಹದ ಇತರ ಕಾಯಿಲೆಗಳಿಂದಲೂ ಆಗಬಹುದು. ಸ್ಥಳೀಯ ಕಾರಣಗಳೆಂದರೆ-

1) ಮೂಗಿಗೆ ಪೆಟ್ಟು ಬೀಳುವುದು : ಇಂದಿನ ಹೆಚ್ಚಿರುವ ವಾಹನ ಸಂಚಾರದಿಂದಾಗಿ ವಾಹನಾಪಘಾತಗಳಾದಾಗ ಮೂಗಿನ ಒಳಭಾಗದಲ್ಲಿರುವ ರಕ್ತನಾಳಗಳ ಹರಿಯುವಿಕೆಯಿಂದ ಹೆಚ್ಚಿನ ರಕ್ತಸ್ರಾವವಾಗುತ್ತದೆ. ಹುಡುಗರು ಮೂಗಿನಲ್ಲಿ ಬೆರಳುಹಾಕುವ ಅಭ್ಯಾಸದಿಂದಾಗಿ ನಡುತಡಿಕೆ ತರೆಯುವುದರಿಂದ ಪೆಟ್ಟಿನ ಪ್ರಮಾಣಕ್ಕೆ ಎಣೆಯಿಲ್ಲದೆ ರಕ್ತಸ್ರಾವವಾಗಬಹುದು. 2) ಮೂಗು ಮತ್ತು ಮೂಗಿನ ಕುಹರಗಳ ಉರಿಯೂತದಿಂದಲೂ, ಮೂಗಿನಲ್ಲಿ ಹಿಕ್ಕು ತೆಗೆಯುವಾಗಲೂ ಹಾಗೂ ಮೂಗಿನ ಕ್ಷಯ ಮತ್ತು ಪಮೇಹರೋಗಗಳಿಂದಾಗಿಯೂ ರಕ್ತಸ್ರಾವವಾಗಬಹುದು. 3) ಮೂಗಿನ ಕ್ಯಾನ್ಸರ್‌ನ ಮೊಟ್ಟ ಮೊದಲ ಲಕ್ಷಣವೆಂದರೆ ದೊಡ್ಡವರಲ್ಲಿ ತಾನೇತಾನಾಗಿ ಯಾವ ಕಾರಣವೂ ಇಲ್ಲದೆ ಆಗುವ ರಕ್ತಸ್ರಾವ. ಇತರ

ಕಾರಣಗಳೆಂದರೆ, ರಕ್ತದ ಒತ್ತಡ ಜಾಸ್ತಿಯಾಗುವುದರಿಂದಲೂ ರಕ್ತ ಕಣದ (ಬಿಳಿಕಣ) ಕಾಯಿಲೆಯಿಂದಲೂ ರಕ್ತಸ್ರಾವವಾಗುತ್ತದೆ. ರಕ್ತವನ್ನು ಹೆಪ್ಪುಗಟ್ಟಿಸುವ ಗೋಳಕೆಗಳು ಕಡಿಮೆಯಾದಾಗ (ಕುಸುಮ ರೋಗ) ಮೂಗಿನಲ್ಲಿ ರಕ್ತಸ್ರಾವವಾಗುತ್ತದೆ. ಅಂತೆಯೇ ಕೆಲವು ಜೀವಸತ್ವಗಳ ಕೊರತೆಯಾದಾಗಲೂ ಕೆಲವು ಅನಪೇಕ್ಷಣಿಯ ಔಷಧಿ ಸೇವನೆಗಳಿಂದಲೂ ಮೂಗಿನಲ್ಲಿ ರಕ್ತಸ್ರಾವವಾಗಬಹುದು. ಮೂಗಿನಲ್ಲಿ ರಕ್ತಬಿದ್ದ ಕೂಡಲೆ ಬಹಳಷ್ಟು ಜನರು ಘಾಬರಿಯಾಗುತ್ತಾರೆ. ಇದರಿಂದ ರಕ್ತದ ಒತ್ತಡ ಜಾಸ್ತಿಯಾಗಿ ಇನ್ನೂ ಹೆಚ್ಚಾಗಿ ರಕ್ತಸ್ರಾವವಾಗಬಹುದು. ಆದ್ದರಿಂದ ರೋಗಿಗೆ ಧೈರ್ಯ ಹೇಳಬೇಕು. ಕೆಲವು ವೇಳೆ ಮೂಗಿನ ಹಿಂಬದಿಯಿಂದ ರಕ್ತಸ್ರಾವವಾಗಿ ರೋಗಿಗೆ ಗೊತ್ತಿಲ್ಲದೆಯೇ ಬಹಳಷ್ಟು ರಕ್ತವನ್ನು ಅವನು ನುಂಗಿ ಒಮ್ಮೆಗೆ ವಾಂತಿ ಮಾಡಬಹುದು. ಇದು ಗಂಭೀರ ಪರಿಸ್ಥಿತಿ. ಸ್ರಾವವಾದ ರಕ್ತಕ್ಕನುಗುಣವಾಗಿ ಚಿಕಿತ್ಸೆಯನ್ನು ಮಾಡಬೇಕು. ಹುಡುಗರಲ್ಲಿ ನಡುತಡಿಕೆಯಿಂದ ರಕ್ತಸ್ರಾವವಾಗುವಾಗ 5-10 ನಿಮಿಷ ಮೂಗಿನ ಹೊಳ್ಳೆಗಳನ್ನು ಅದುಮಿ ಹಿಡಿದುಕೊಳ್ಳುವುದರಿಂದ ರಕ್ತ ಸೋರುವುದು ನಿಲ್ಲುವುದು. ವಾಹನಾಪಘಾತಗಳಾದಾಗ ಮೂಗಿನಿಂದ ರಕ್ತ ಸೋರುತ್ತಿದ್ದರೆ ಅಪಘಾತಕ್ಕೀಡಾದವರನ್ನು ಪಕ್ಕಕ್ಕೆ ಮಲಗಿಸಿ ಮುಖದ ಮೇಲೆ ತಣ್ಣೀರು ಬಟ್ಟೆಯನ್ನು ಹಾಕುವುದರಿಂದ ಕೆಲವು ವೇಳೆ ರಕ್ತಸ್ರಾವವನ್ನು ತಡೆಗಟ್ಟಬಹುದು. ಇನ್ನೂ ಕೆಲವು ವೇಳೆ ಮೂಗಿನಲ್ಲಿ ಜಾಳರಿವೆಯ ನೀಳಪಟ್ಟಿಯನ್ನು (ರಿಬ್ಬನ್‌ಗಾಜ್) ತುರುಕಿ ರಕ್ತಸ್ರಾವವನ್ನು ನಿಲ್ಲಿಸಬೇಕು. ಇನ್ನೂ

ಗಂಭೀರ ಪರಿಸ್ಥಿತಿಯಲ್ಲಿ ರಕ್ತಧಮನಿಗಳನ್ನು ಕಟ್ಟಬೇಕಾಗುವುದು. ವೈದ್ಯರೇ ಇದನ್ನು ಮಾಡಲು ಸಾಧ್ಯ.

ಇವುಗಳಲ್ಲದೆ ಚುಚ್ಚುಮದ್ದು ಕೊಟ್ಟು ರೋಗಿಗೆ ನಿದ್ರೆ ಬರುವಂತೆ ಮಾಡಬೇಕು. ಕೆಲವೊಮ್ಮೆ ಬದಲಿ ರಕ್ತ ಕೊಡುವುದರಿಂದ ರಕ್ತಸ್ರಾವದಿಂದಾಗುವ ಪ್ರಾಣಾಪಾಯವನ್ನು ತಡೆಗಟ್ಟಬಹುದು. ಪದೇ ಪದೇ ಆಗುವ ರಕ್ತಸ್ರಾವಕ್ಕೆ ಕಾರಣಗಳನ್ನು ಹುಡುಕಿ ಚಿಕಿತ್ಸೆ ಮಾಡಿಸಬೇಕು.

## (ಉ) ಮೂಗಿನ ಅಲರ್ಜಿ (ಒಗ್ಗದಿಕೆ)

ಅಲರ್ಜಿ (ಅಥವಾ ಒಗ್ಗದಿಕೆ) ಎನ್ನುವ ಪದ ಸಾಮಾನ್ಯ ಬಳಕೆಯಲ್ಲಿ ಎಷ್ಟರಮಟ್ಟಿಗೆ ಇದೆಯೆಂದರೆ ಮನೆಯಲ್ಲಿನ ಅಜ್ಜಿಗೂ ಕೂಡ ಅದರ ಅರ್ಥ ಗೊತ್ತಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಕೆಲವರಿಗೆ ಕೆಲವು ಪದಾರ್ಥಗಳನ್ನು ಮುಟ್ಟಿದಾಗ ಆಗಲಿ, ಆಘ್ರಾಣಿಸಿದಾಗ ಆಗಲಿ ಅಥವಾ ತಿಂದರಾಗಲಿ ಮೈಯಲ್ಲಿ ವಿಕೃತ ಪ್ರತಿಕ್ರಿಯೆಗಳಾಗುತ್ತವೆ. ಇದಕ್ಕೆ ಅಲರ್ಜಿ ಎಂದು ಹೆಸರು. ದೇಹದ ಬೇರೆ ಬೇರೆ ಅಂಗಗಳು ಚರ್ಮ ರಕ್ತನಾಳಗಳು, ಪುಪ್ಪುಸ, ಮೂಗು ಇವೇ ಮೊದಲಾದವುಗಳು ಈ ಪ್ರತಿಕ್ರಿಯೆಯಲ್ಲಿ ಪಾಲ್ಗೊಳ್ಳುತ್ತವೆ. ಈ ಕಾಯಿಲೆ ಬರುಬರುತ್ತಾ ಜಾಸ್ತಿಯಾಗಿ ಕಾಣಸಿಕೊಳ್ಳುತ್ತದೆ. ಅದರಲ್ಲೂ ಪಟ್ಟಣವಾಸಿಗಳಲ್ಲಿ ಜಾಸ್ತಿ. ಪಾಶ್ಚಿಮಾತ್ಯ ದೇಶಗಳಲ್ಲಂತೂ ಈ ಕಾಯಿಲೆಯ ಉಪದ್ರವ ಬಹಳ. ನಾಗರಿಕತೆಯ ಶಾಪವೋ ಎನಿಸುತ್ತದೆ.

ಮೂಗಿನ ಅಲರ್ಜಿ ನಾನಾರೀತಿಯ ಒಗ್ಗದಿಕೆ ಜನಕಗಳಿಂದ (Allergens) ಉಂಟಾಗುತ್ತದೆ. ಈ ಜನಕಗಳು ದೇಶವನ್ನು ಸೇರಿದಾಗ ಎದುರು ಕಂಟುಗಳು (Antibodies) ಉತ್ಪಾದನೆ ಆಗುತ್ತದೆ. ಈ ಕಂಟುಗಳು ಎರಡು ವಿಧ: 1) ರಕ್ತದಲ್ಲಿ ಸಂಚಾರ ಮಾಡುವುದು ಮತ್ತು 2) ದೇಹಕ್ಕೆ (ಲೋಳ್ಪರೆ) ಮುಂತಾದವುಗಳಿಗೆ ಅಂಟಿಕೊಂಡಿರುವುದು. ಅಂಟಿಕೊಂಡಿರುವ ಕಂಟುಗಳಿಗೂ ಮತ್ತು ಜನಕಗಳಿಗೂ ಕ್ರಿಯೆ ಉಂಟಾದಾಗ ಹಿಸ್ಟಮಿನ್ ಎಂಬ ವಸ್ತುವು ಉದ್ಭವಿಸಿ ಕೆಲವು ಪ್ರತಿಕ್ರಿಯೆಗಳನ್ನು ಉಂಟು ಮಾಡುತ್ತದೆ. ಇದು ಒಗ್ಗದಿಕೆಯ ಮೂಲ ಶಾಸ್ತ್ರ. ಮೂಗಿನ ಅಲರ್ಜಿಗೆ ಸಾಮಾನ್ಯವಾಗಿ ಕಂಡು ಬರುವ ಜನಕಗಳೆಂದರೆ-

1) **ತಿನ್ನುವ ಪದಾರ್ಥಗಳು** : ಉದಾ - ಹಾಲು, ಮೊಟ್ಟೆ, ಮೀನು, ಬಾಳೆಹಣ್ಣು.

2) **ಆಘ್ರಾಣೀಯ ಪದಾರ್ಥಗಳು** : ಪೂ. ಧೂಳು, ಮನೆಯ ಧೂಳು.

3) **ಚರ್ಮಕ್ಕೆ ತಗಲುವ ಪದಾರ್ಥಗಳು** : ಕೃತಕ ಬಟ್ಟೆ, ಕೆಲವು ಸಸ್ಯಗಳು, ಶೃಂಗಾರ ಸಾಧನಗಳು, ತಣ್ಣನೆಯ ಗಾಳಿ ಇತ್ಯಾದಿ. ಈ ಪದಾರ್ಥಗಳ ಸಂಪರ್ಕವಾದಾಗ ಇದ್ದಕ್ಕಿದ್ದ ಹಾಗೆ ಮೂಗಿನ ತುದಿಯಲ್ಲಿ ತುರಿಕೆಯುಂಟಾಗಿ ಸೀನುಗಳು ಬರುತ್ತವೆ. ಈ ಸೀನುಗಳು ಒಂದರ ಹಿಂದೊಂದು ಲೆಕ್ಕವಿಲ್ಲದಷ್ಟು ಬಂದು ಬಹಳ ಸುಸ್ತು ಮಾಡುತ್ತವೆ. ಸೀನುಗಳ ಜೊತೆಗೆ ಮೂಗಿನಲ್ಲಿ ನೀರು ಸೋರು

ವುದಕ್ಕೆ ಶುರುವಾಗಿ, ನಲ್ಲಿಯಂತೆ ನೀರು ಸೋರುತ್ತದೆ. ಕೆಲವರಿಗೆ ಕರವಸ್ತ್ರಗಳು ಸಾಕಾಗದೇ ಮಡಿಪಂಚೆಯೇ ಬೇಕಾಗುತ್ತದೆ. ಮೂಗು ಕಟ್ಟಿಕೊಂಡು ಉಸಿರಾಡುವುದಕ್ಕೆ ಕಷ್ಟವಾಗುತ್ತದೆ. ಮುಖ ವೆಲ್ಲಾ ಬಾತಿದೆಯೆಂಬಂತೆ ಅನಿಸುತ್ತದೆ. ಕಣ್ಣಿನಲ್ಲಿ ತುರಿಕೆ ಬಂದು ಕಣ್ಣಲ್ಲೂ ನೀರು ಬರುತ್ತದೆ. ಕೆಲವರಿಗೆ ಮೈಯೆಲ್ಲಾ ಪರಚಿಕೊಳ್ಳ ಬೇಕೆನಿಸುತ್ತದೆ. ಗಂಧೆಗಳೂ ಏಳಬಹುದು. ಸ್ವಲ್ಪ ಹೊತ್ತಿನ ಮೇಲೆ, ಸೀನು, ನೀರು ಸೋರುವುದು, ತುರಿಕೆ ಎಲ್ಲವೂ ತನಗೆ ತಾನೇ ನಿಂತುಹೋಗುತ್ತದೆ. ಈ ಸ್ಥಿತಿಯಲ್ಲಿ ಯಾರಾದರೂ ನೋಡಿ ದರೆ ರೋಗಿಯು ಹೇಳುವುದು ಸುಳ್ಳೇನೋ ಅನ್ನಿಸುತ್ತದೆ.

ಮೊದಮೊದಲಿಗೆ ಈ ಲಕ್ಷಣಗಳು ಇಷ್ಟು ನಾಟಕೀಯವಾಗಿ ಬಂದರೂ ಬರಬರುತ್ತಾ ನೀರು ಸೋರುವುದು ಮತ್ತು ಮೂಗು ಕಟ್ಟಿಕೊಳ್ಳುವುದೂ ಬೇರೂರಿ ಉಪದ್ರವವಾಗುತ್ತದೆ. ಮೂಗಿನಲ್ಲಿ ಕಾಯಿಗಳು ಬೆಳೆಯುವುದೂ ಉಂಟು. ಮೂಗಿನ ಲಕ್ಷಣಗಳು ಶ್ವಾಸನಾಳಗಳಿಗೂ ಹರಡಿ ಉಬ್ಬಸರೋಗ ಬರಬಹುದು. ಈ ರೋಗದಲ್ಲಿ ಪ್ರಾಣಾಪಾಯವಿಲ್ಲದಿದ್ದರೂ ಕೆಲಸ ಕಾರ್ಯಗಳಿಗೆ ಬಹಳ ಅಡ್ಡಿ ಮಾಡಿ ಚಿತ್ತದ ಏಕಾಗ್ರತೆಯನ್ನು ಕೆಡಿಸಿ ಮನಸ್ಸಿನ ಮೇಲೆ ಪರಿಣಾಮ ಮಾಡುತ್ತದೆ.

ಮೇಲಿನ ಲಕ್ಷಣಗಳಿಂದ ರೋಗ ನಿದಾನವನ್ನು ಮಾಡಬ ಹುದು. ಇದು ಅನುವಂಶಿಕವಾಗಿಯೂ ಬರುತ್ತದೆ. ರೋಗ ನಿದಾನ ಎಷ್ಟು ಸುಲಭವೋ ರೋಗವನ್ನು ನಿರ್ಮೂಲ ಮಾಡುವುದು ಅಷ್ಟೇ ಕಷ್ಟ. ಏಕೆಂದರೆ ಒಗ್ಗದಿಕೆ ಜನಕ ಕಂಡುಹಿಡಿಯುವುದು ಅಷ್ಟು

ಸುಲಭವಲ್ಲ. ತಿಳಿದಿರುವ ಜನಕಗಳನ್ನು ಚುಚ್ಚುಮದ್ದುಗಳ ಮೂಲಕ ಚರ್ಮಕ್ಕೆ ಕೊಟ್ಟು ಪ್ರತಿಕ್ರಿಯೆ ಉಂಟಾಗುತ್ತದೆಯೋ ಎಂಬುದನ್ನು ತಿಳಿದುಕೊಳ್ಳಬೇಕು. ಅಂತಹ ಜನಕಗಳನ್ನು ಸ್ವಲ್ಪಸ್ವಲ್ಪವಾಗಿ ದೇಹದಲ್ಲಿ ಸೇರಿಸಿ ಪ್ರತಿಕ್ರಿಯೆ ಆಗದಂತಹ ಸ್ಥಿತಿಗೆ ತರಬೇಕು. ಇದು ಕಷ್ಟ ಸಾಧ್ಯ ಮತ್ತು ಎಲ್ಲರಲ್ಲೂ ಒಂದೇ ರೀತಿಯ ಫಲಕೊಡುವುದಿಲ್ಲ. ಈ ಪ್ರತಿಕ್ರಿಯೆ ಹಿಸ್ಟಮಿನ್‌ನಿಂದ ಆಗುವುದರಿಂದ ಹಿಸ್ಟಮಿನ್ ರೋಧಕ ಗುಳಿಗೆಗಳನ್ನು ತೆಗೆದುಕೊಳ್ಳುವುದರಿಂದ ತಡೆಗಟ್ಟಬಹುದು. ವಿಶೇಷವಾಗಿ ಈ ಗುಳಿಗೆಗಳು ಉಪಯೋಗದಲ್ಲಿವೆ. ಇದಲ್ಲದೆ ಹಿಸ್ಟಮಿನ್ ರೋಧಕಗಳುಳ್ಳ ಮೂಗಿನ ಹನಿಗಳು (Nasal drops) ತಾತ್ಕಾಲಿಕ ಫಲವನ್ನು ಕೊಡುತ್ತವೆ. ಕಾರ್ಟಿಸೋನ್ ಇಂಜಕ್ಷನ್‌ಗಳನ್ನು ಮೂಗಿನ ಲೋಳ್ಪರೆಯಲ್ಲಿ ಕೊಡುವುದರಿಂದ ಚಳಿಗಾಲ, ಮಳೆಗಾಲ, ಈ ರೀತಿ ಕಾಲಮಾನಗಳಲ್ಲಿ ಬರುವ ಒಗ್ಗದಿಕೆಗೆ ಬಹಳ ಅನುಕೂಲ. ಮೂಗಿನ ಲೋಳ್ಪರೆಯನ್ನು ಕರೆಂಟ್‌ನಿಂದ ಸುಡುವುದೂ ಒಂದು ಪದ್ಧತಿ. ಮೂಗಿನ ಅನುವೇದನ ಮತ್ತು ಉಪಾನುವೇದನ ನರಗಳನ್ನು ಕತ್ತರಿಸುವುದರಿಂದಲೂ ಈ ಕಾಯಿಲೆಯನ್ನು ತಡೆಗಟ್ಟಬಹುದು.

### (ಊ) ಮೂಗಿನ ಕುಹರ ರೋಗಗಳು

ಇತ್ತೀಚಿನ ದಿನಗಳಲ್ಲಿ ಕೈಗಾರಿಕೋದ್ಯಮ ಮತ್ತು ಇತರ ಕೆಲಸಗಾರರಲ್ಲಿ ಅತ್ಯಂತ ಹೆಚ್ಚಿನ ಗೈರುಹಾಜರಿಗೆ ಕಾರಣವಾದ ಏಕೈಕ ಕಾಯಿಲೆ ಎಂದರೆ ಈ ಕುಹರ ರೋಗಗಳು. ಮೂಗಿನ ಸುತ್ತ ಇರುವ ಕುಹರಗಳು ಲೋಳ್ಪರೆಯ ಉರಿಯೂತಕ್ಕೆ ಕಾರಣಗಳು

ಅನೇಕ : 1) ಪೆಟ್ಟು ಬೀಳುವುದು ಮತ್ತು ಕುಹರಗಳಲ್ಲಿ ರಕ್ತ ಹುಪ್ಪುಗಟ್ಟಿಕೊಳ್ಳುವುದು. 2) ನೆಗಡಿಯಾದಾಗ ಮೂಗಿನಿಂದ ಕುಹರಗಳಿಗೆ ಸೋಂಕು ಹರಡುತ್ತದೆ. ಮೂಗಿನ ಎರಡೂ ಹೊಳ್ಳೆಗಳನ್ನು ಮುಚ್ಚಿಕೊಂಡು ಸಿಂಬಳವನ್ನು ತೆಗೆಯುವ ಅಭ್ಯಾಸ ಸರ್ವೇಸಾಮಾನ್ಯ ಎಲ್ಲರಲ್ಲೂ ಇದೆ. ಈ ರೀತಿ ಮಾಡುವುದು ತಪ್ಪು, ಹೊಳೆಗಳನ್ನು ತೆರೆದಿಟ್ಟು ಮೆಲ್ಲನೇ ಸೀನಬೇಕು. ಅಥವಾ ಒಂದು ಹೊಳ್ಳೆ ಮುಚ್ಚಿಕೊಂಡು ಇನ್ನೊಂದನ್ನು ತೆರೆದಿಟ್ಟು ಸೂಕ್ಷ್ಮವಾಗಿ ಸೀನಬೇಕು. ರಭಸದಿಂದ ಸೀನುವುದನ್ನು ತಪ್ಪಿಸಬೇಕು. 3) ನೆಗಡಿಯಾದಾಗ ನೀರಿನಲ್ಲಿ ಈಜಾಡುವುದು, ಮುಳುಗುವುದೂ ಸೋಂಕು ಹರಡುವುದಕ್ಕೆ ಅನುಕೂಲಮಾಡಿಕೊಡುತ್ತದೆ. ಆದ್ದರಿಂದ ಅದನ್ನು ತಪ್ಪಿಸಬೇಕು. 4) ವಾತಾವರಣದ ಏರುಪೇರುಗಳು ಇದ್ದಾಗಲೂ ಕುಹರದ ಉರಿಯೂತ ಉಂಟಾಗುತ್ತದೆ. 5) ಹಲ್ಲಿನಿಂದಲೂ ಕುಹರಗಳಿಗೆ ಸೋಂಕು ತಗಲುತ್ತದೆ. ಈ ನೇರ ಕಾರಣಗಳಲ್ಲದೆ ಬಡತನ, ಹಸಿವು, ಪುಷ್ಟಿಯಾದ ಆಹಾರ ಇಲ್ಲದಿರುವುದೂ ಮತ್ತು ನಿಬಿಡ ಪ್ರದೇಶಗಳಲ್ಲಿ ವಾಸಮಾಡುವುದು ಇವುಗಳು ಅಪ್ರತ್ಯಕ್ಷವಾಗಿ ಕುಹರದ ಉರಿಯೂತಕ್ಕೆ ಕಾರಣಗಳು ವಿಷಕ್ರಿಮಿಗಳು ಬೇರೆಯಾಗಿ ಅಥವಾ ಒಟ್ಟಿಗೆ ಕಾರಣೀಭೂತವಾಗಿರಬಹುದು.

ಲಕ್ಷಣಗಳು : ಈ ರೋಗದ ಲಕ್ಷಣಗಳು ಸೌಮ್ಯ ಅಥವಾ ಉಲ್ಬಣದ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಉಲ್ಬಣ ಸ್ಥಿತಿಯಲ್ಲಿ ಜ್ವರ, ಮೈಕೈ ನೋವು ಬಂದು ಹಾಸಿಗೆ ಹಿಡಿಯುವಂತಾಗುತ್ತದೆ. ಮೂಗಿನ ಇಕ್ಕೆಡೆಗಳಲ್ಲೂ, ಹಣೆಯ ಮೇಲೂ ನೋವು ಮತ್ತು

ಭಾರವಾಗಿರುವುದು ಈ ಉರಿಯೂತದ ಪ್ರಥಮ ಚಿಹ್ನೆ. ಗಂಟಲಿನಲ್ಲಿ ಕೆರೆತ, ಗಂಟಲಿನಲ್ಲಿ ಸಿಂಬಳ ಉಸಿರಾಡುವುದಕ್ಕೆ ಕಷ್ಟವಾಗುತ್ತದೆ. ವಾಸನೆಯಲ್ಲಿ ವ್ಯತ್ಯಾಸವುಂಟಾಗಿ ಕೆಟ್ಟ ವಾಸನೆ ಬರಬಹುದು. ಹಣೆಯ ಕುಹರದ ಉರಿಯೂತದಲ್ಲಿ ಹಣೆ ಭಾರ, ಬೆಳಗ್ಗೆ ಎದ್ದಾಗ ಇದ್ದು ದಿನ ಕಳೆದಂತೆಲ್ಲಾ ಭಾರವೂ ಕಮ್ಮಿಯಾಗುವುದು.

ಉರಿಯೂತವು ಬೇರೂರಿದಾಗ (Chronic) ಮೇಲಿಂದ ಮೇಲೆ ನೆಗಡಿಯಾಗುವುದು, ಮೂಗಿನಲ್ಲಿ ಕೀವು ಸೇರಿದ ಸಿಂಬಳ ಸುರಿಯುವುದು, ಮೂಗಿನಲ್ಲಿ ರಕ್ತ ಬರುವುದು, ಮೇಲಿಂದ ಮೇಲೆ ತಲೆನೋವು ಬರುವುದು, ಕಣ್ಣಿನಲ್ಲಿ ನೀರು ಸೋರುವುದು, ಕಿವಿ ಸೋರುವುದು, ಕೆಮ್ಮು ಮತ್ತು ಕಫ ಬರುವುದು ಈ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಇಂತಹ ಲಕ್ಷಣಗಳಿದ್ದಾಗ ತಜ್ಞರಿಂದ ಪರೀಕ್ಷೆ ಮಾಡಿಸಿಕೊಂಡು ಕಾರಣಗಳನ್ನು ಹುಡುಕಿ ನಿರ್ಮೂಲ ಮಾಡಬೇಕು. ಅವಶ್ಯವಿದ್ದರೆ ಕುಹರದ ವಿಕಿರಣ ಚಿತ್ರಗಳನ್ನು ತೆಗೆದು ರೋಗ ನಿದಾನವನ್ನು ಮಾಡಬೇಕು. ತೀವ್ರ ಉರಿಯೂತವಿದ್ದಾಗ ಸೋಂಕು ನಿರ್ಮೂಲ ಮಾಡುವ ಸೂಜಿಮದ್ದುಗಳನ್ನು 5 ರಿಂದ 7 ದಿವಸಗಳವರೆಗೆ ಕೊಡಬೇಕು. ನೋವು, ಉರಿಯೂತ ಮತ್ತು ಕೆರೆತವನ್ನು ಕಮ್ಮಿ ಮಾಡಲು ನೋವಳಿಕೆ ಗುಳಿಗೆಗಳನ್ನು ಕೊಡಬೇಕು. ಆವಿಯ ಹೊಗೆ ತೆಗೆದುಕೊಳ್ಳುವುದರಿಂದಲೂ, ಮೂಗಿನಲ್ಲಿ ಹನಿಗಳನ್ನು ಹಾಕಿಕೊಳ್ಳುವುದರಿಂದಲೂ ಉರಿಯೂತವನ್ನು ತಡೆಗಟ್ಟಬಹುದು.

ಕೀವನ್ನು ಹೊರತೆಗೆಯಲೂ ಮತ್ತು ಕೊಳೆತುಹೋಗಿರುವ ಲೋಳ್ಪರೆಯನ್ನು ತೆಗೆಯುವುದಕ್ಕೂ ಶಸ್ತ್ರಚಿಕಿತ್ಸೆ ಮಾಡಬೇಕು. ಈ ಕುಹರದ ರೋಗಗಳಿಂದ ಕಣ್ಣು, ಮಿದುಳು ಮತ್ತು ರಕ್ತಧಮನಿಗಳಿಗೆ ಸೋಂಕು ತಗುಲಿ ದುಷ್ಪರಿಣಾಮಗಳು ಉಂಟಾಗುವುದರಿಂದ, ಉರಿಯೂತವು ಬೇರೂರಿರುವುದನ್ನು ತಪ್ಪಿಸಬೇಕು. ತಜ್ಞರ ಪರೀಕ್ಷೆ ಅವಶ್ಯಕ.

# ಅಧ್ಯಾಯ - 4

## ಗಂಟಲಿನ ಕಾಯಿಲೆಗಳು

**ಅ) ಮೂಗಳ್ಳೆ ಮತ್ತು ಮೆಂಡಿಕೆ (ಅಡಿನಾಯಿಡ್ ಮತ್ತು ಟಾನ್ಸಿಲ್ಸ್)** : ಗಂಟಲು ಕುಳಿಯ ಇಕ್ಕೆಡೆಗಳಲ್ಲೂ ನಾಲಿಗೆಯ ಬುಡದಲ್ಲೂ ಮತ್ತು ಮೂಗಿನ ಹಿಂಭಾಗದಲ್ಲೂ ದುಗ್ಧರಸ ಗ್ರಂಥಿಗಳು ಇರುತ್ತವೆ. ಶ್ವಾಸನಾಳ ಮತ್ತು ಅನ್ನನಾಳಗಳನ್ನು ಸಂರಕ್ಷಿಸುವುದು ಇವುಗಳ ಮುಖ್ಯ ಕೆಲಸ. ಇವುಗಳಲ್ಲಿ ಮುಖ್ಯವಾದ ಗ್ರಂಥಿಗಳೆಂದರೆ ಮೂಗಳ್ಳೆ (ಅಡಿನಾಯಿಡ್ಸ್) ಮತ್ತು ಮೆಂಡಿಕೆ (ಟಾನ್ಸಿಲ್ಸ್).

ಚಿಕ್ಕಮಕ್ಕಳಲ್ಲಿ ಮತ್ತು ಹುಡುಗರಲ್ಲಿ ಇವು ದೊಡ್ಡದಾಗಿರುತ್ತದೆ. ಕ್ರಮೇಣ ದೊಡ್ಡವರಾದಂತೆ ಈ ಗ್ರಂಥಿಗಳು ಕರಗುತ್ತಾ ಬರುತ್ತವೆ. 18-20 ವರ್ಷದವರಲ್ಲಿ ಸಾಮಾನ್ಯವಾಗಿ ಮೂಗಳ್ಳೆಗಳು ಕಾಣಸುವುದು ಅಪರೂಪ. ಆದರೆ ನಾನಾಕಾರಣಗಳಿಂದಲೂ, ವಿಷಾಣು ಮತ್ತು ವಿಷಕ್ರಿಮಿಗಳಿಂದಲೂ ಈ ಮೂಗಳ್ಳೆ ಮತ್ತು ಮೆಂಡಿಕೆಗಳು ದೊಡ್ಡದಾಗಿ ಅಥವಾ ಉರಿಯೂತಕ್ಕೊಳಗಾಗಿ ಕಾಯಿಲೆಯನ್ನು ತರಲು ಸಾಧ್ಯವಿದೆ.

ಮೂಗಳ್ಳೆ ದೊಡ್ಡದಾಗುವುದರಿಂದ ಈ ಕೆಳಕಂಡ ತೊಂದರೆಗಳುಂಟಾಗುತ್ತವೆ :

ಮಕ್ಕಳು ಮೂಗಿನಲ್ಲಿ ಉಸಿರಾಡುವುದಕ್ಕೆ ಆಗದೆ ಬಾಯಿಯಿಂದ ಉಸಿರಾಡಿಸುತ್ತವೆ. ಇದರಿಂದಾಗಿ ರಾತ್ರಿ ಮಲಗಿಕೊಂಡಾಗ ಗೊರಕೆ ಹೊಡೆಯುತ್ತಾರೆ. ಊಟ ಮಾಡುವುದಕ್ಕೆ ಬಹಳ ಹೊತ್ತು ತೆಗೆದುಕೊಳ್ಳುತ್ತಾರೆ. ಇಂತಹ ಮಕ್ಕಳ ಎದೆಯ ಬೆಳವಣಿಗೆ ಕೂಡ ಸರಿಯಾಗಿ ಆಗುವುದಿಲ್ಲ. ಮೂಗಳ್ಳೆಯ ಉರಿಯೂತದಿಂದ ಮೇಲಿಂದ ಮೇಲೆ ಈ ಮಕ್ಕಳಿಗೆ ನೆಗಡಿಯಾಗುತ್ತದೆ. ಕರ್ಣನಾಸಿಕ ನಾಳದ ಮುಖಾಂತರ ಉರಿಯೂತ ನಡುಗಿವಿಗೂ ಹರಡಿ ಕಿವಿಯೊಡೆದು ಕಿವಿಯಿಂದ ಕೀವು ಬರುತ್ತದೆ. ಕಿವಿ ಮಂದವಾಗಿ ಕಿವಿ ಕೇಳಿಸುವುದೂ ಕಡಿಮೆಯಾಗುವುದರಿಂದ ಅಭ್ಯಾಸದಲ್ಲಿ ಹಿಂದೆ ಬೀಳುತ್ತಾರೆ. ಕೆಲವೊಂದು ಸಾರೆ ಮೂಗಿನಿಂದ ರಕ್ತಸ್ರಾವವೂ ಆಗಬಹುದು. ಶಸ್ತ್ರಚಿಕಿತ್ಸೆಯಿಂದ ಮೂಗಳ್ಳೆಗಳನ್ನು ತೆಗೆಯುವುದರಿಂದ ಸಂಪೂರ್ಣ ಗುಣ ಪಡೆಯಬಹುದು.

**ಮೆಂಡಿಕೆ (ಟಾನ್ಸಿಲ್)** : ಇದಕ್ಕೆ ಗಲಗ್ರಂಥಿ ಎಂದೂ ಕರೆಯುತ್ತಾರೆ. ಮೆಂಡಿಕೆ ಉರಿಯೂತವೂ ಒಂದಲ್ಲ ಒಂದು ಸಾರಿ ಎಲ್ಲರಿಗೂ ಬಂದೇ ಇರುತ್ತದೆ. ಗಂಟಲು ಕೆರೆತ, ನುಂಗುವಾಗ ಅಥವಾ ಮಾತನಾಡುವಾಗ ನೋವಾಗುವುದು. ಕುತ್ತಿಗೆಯಲ್ಲಿ ಕೆಳದವಡೆಯ ಬಿಳಿ ದುಗ್ಧರಸ ಗ್ರಂಥಿಗಳು ಉಬ್ಬುವುದು, ಮೈ ಬೆಚ್ಚಗಾಗುವುದು ಮತ್ತು ಆಲಸ್ಯ ತಲೆದೋರುವುದು- ಈ ರೋಗದ ಆಲಕ್ಷಣಗಳು. ಚುಚ್ಚುಮದ್ದಿನಿಂದ ಹಾಗೂ ಒಂದು ಲೋಟ ಬೆಚ್ಚನೆಯ ನೀರಿಗೆ ಒಂದು ಚಿಟಿಕೆ ಉಪ್ಪು ಹಾಕಿ ದಿನಕ್ಕೆ 3-4 ಸಾರೆ ಗಂಟಲು ಮುಕ್ಕಳಿಸುವುದರಿಂದ ಇದನ್ನು ವಾಸಿ ಮಾಡಬೇಕು.

ಈ ರೀತಿ ಉರಿಯೂತ ಮೇಲಿಂದ ಮೇಲೆ ಬರುತ್ತಿದ್ದರೆ ಈ ಕೆಳಗೆ ವಿವರಿಸಿದ ಸಂದರ್ಭಗಳಲ್ಲಿ ಈ ಮೆಂಡಿಕೆಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆಯಿಸಿಬಿಡುವುದು ಶ್ರೇಯಸ್ಕರ.

1) ಗಲಗ್ರಂಥಿಗಳು ಕೀವುಗೊಳ್ಳುವುದು (ಕ್ವಿನ್ಸಿ).

2) ಮೆಂಡಿಕೆಗಳು ಬಹಳ ದೊಡ್ಡದಾಗಿ ನುಂಗುವುದಕ್ಕೆ ಉಸಿರಾಡುವುದಕ್ಕೆ ಮತ್ತು ಮಾತನಾಡುವುದಕ್ಕೆ ಅಡಚಣೆಯುಂಟಾಗುವುದು.

3) ಗಲಗ್ರಂಥಿಗಳ ಉರಿಯೂತದಿಂದ ಹೃದಯ, ಮೂತ್ರಪಿಂಡ, ಮತ್ತು ಕೀಲುಗಳಿಗೆ ವ್ಯಾಧಿ ತಾಕುವುದು.

4) ಗಂಟಲು ಮಾರಿರೋಗ (ಡಿಫ್ತೀರಿಯಾ) ಬಂದ ಮೇಲೆ ಶಸ್ತ್ರಚಿಕಿತ್ಸೆ ಮಾಡಿ ಮೆಂಡಿಕೆಗಳನ್ನು ತೆಗೆದುಹಾಕುವುದರಿಂದ ಈ ಕಾಯಿಲೆಗಳನ್ನು ಸಂಪೂರ್ಣವಾಗಿ ತಡೆಗಟ್ಟಬಹುದು.

## (ಆ) ಗಂಟಲು ಉರಿ.

ಮೆಂಡಿಕೆಯಿಂದಲ್ಲದೆ ಇತರ ಕಾರಣಗಳಿಂದಲೂ ಈ ಗಂಟಲು ಉರಿ ಬರುತ್ತದೆ. ನೆಗಡಿ ಬಂದಾಗ, ಖಾರವಾದ ಪದಾರ್ಥಗಳನ್ನು ತಿಂದಾಗ, ಮದ್ಯಸೇವನೆಯಿಂದ, ಬೀಡಿ, ಸಿಗರೇಟು, ಚುಟ್ಟಾಗಳನ್ನು ಸೇದುವುದರಿಂದ, ಎಲೆ, ಅಡಿಕೆ, ಹೊಗೆಸೊಪ್ಪು, ಸುಣ್ಣ ಅವುಗಳನ್ನು ಹೆಚ್ಚಾಗಿ ಉಪಯೋಗಿಸುವುದರಿಂದಲೂ ಗಂಟಲು ಉರಿ ಬರುತ್ತದೆ. ಮಾತನಾಡುವುದೇ ದಿನನಿತ್ಯದ ಕಸಬು, ಹಾಗೂ ಬಂಡವಾಳವಾಗಿರುವ ಶಿಕ್ಷಕರು, ವಕೀಲರು, ಬೀದಿಗಳಲ್ಲಿ

ಸಾಮಾನುಗಳನ್ನು ಮಾರುವವರೂ, ಸಂಗೀತಗಾರರೂ, ನಾಟಕಕಾರರೂ, ಸಿನೇಮಾಗಳಲ್ಲಿ ಪಾತ್ರ ವಹಿಸುವವರು ಮುಂತಾದವರಲ್ಲಿ ಗಂಟಲು ಉರಿ ಮೇಲಿಂದ ಮೇಲೆ ತಲೆದೋರುತ್ತದೆ. ಈ ಸಂದರ್ಭಗಳಲ್ಲಿ ತಪ್ಪಿತಸ್ಥ ಕಾರಣಗಳನ್ನು ಹುಡುಕಿ ಅವುಗಳಿಗೆ ತಕ್ಕ ಚಿಕಿತ್ಸೆ ಮಾಡುವುದರಿಂದ ಗಂಟಲು ಉರಿಯನ್ನು ತಡೆಗಟ್ಟಬಹುದು. ಬೆಚ್ಚನೆಯ ಉಪ್ಪು ನೀರಿನಿಂದ ದಿನಕ್ಕೆ 4-5 ಬಾರಿ ಬಾಯಿ ಮುಕ್ಕಳಿಸುವುದರಿಂದಲೂ ನೋವಿನ ಉಪಶಮನವಾಗುತ್ತದೆ. ಗಂಟಲು ಕೆರೆತ ಹಾಗೂ ಗಂಟಲು ಉರಿ ಪದೇ ಪದೇ ಬರುವವರು ತಜ್ಞ ವೈದ್ಯರಿಂದ ಚಿಕಿತ್ಸೆ ಪಡೆಯಬೇಕೇ ವಿನಹ ಅಂಗಡಿಗಳಲ್ಲಿ ಸುಲಭವಾಗಿ ದೊರೆಯುವ ಚೀಪುವ ಮಾತ್ರೆಗಳನ್ನು (ಲಾಸೆಂಜಸ್) ಹೆಚ್ಚಾಗಿ ಉಪಯೋಗಿಸಬಾರದು. ಈ ಮೇಲೆ ಹೇಳಿದ ಕಾರಣಗಳಲ್ಲದೆ ವಿಷಾಣು ಮತ್ತು ವಿಷಕ್ರಿಮಿಗಳಿಂದಲೂ ಗಂಟಲು ಉರಿ ಮತ್ತು ಉರಿಯೂತ ಬರುತ್ತದೆ. ನಮ್ಮ ದೇಶದಲ್ಲಿ ಮತ್ತು ಈ ಪ್ರಾಂತದಲ್ಲಿ ಹೆಚ್ಚಾಗಿ ಕಾಣಬರುವ ಉಗ್ರ ತರದ, ಪ್ರಾಣಾಪಾಯವಿರುವ ರೋಗವೆಂದರೆ ಗಂಟಲು ಮಾರಿ (ಡಿಫ್ತೀರಿಯಾ).

### (ಇ) ಗಂಟಲು ಮಾರಿ.

ಈ ರೋಗವು ಮಕ್ಕಳು ಮತ್ತು ಹುಡುಗರಲ್ಲಿ ವಿಶೇಷವಾಗಿ ಕಾಣಿಸುತ್ತದೆ. ಈ ಕಾಯಿಲೆಗೆ ಕಾರಣವಾದ ವಿಷಕ್ರಿಮಿಗಳು ಕೆಮ್ಮುವಾಗ ಒಬ್ಬರಿಂದ ಒಬ್ಬರಿಗೆ ಹರಡುತ್ತವೆ. ರೋಗ ತಗುಲಿದ ಕೇಲವೇ ಗಂಟೆಗಳಲ್ಲಿ ಗಂಟಲು ನೋವು ಕಾಣಿಸಿಕೊಳ್ಳುತ್ತದೆ. ಜ್ವರದ ಕಾವು ಹೆಚ್ಚು ಇರುವುದಿಲ್ಲ. ಆದರೂ ರಕ್ತದಲ್ಲಿ ನಂಜು

ಜಾಸ್ತಿಯಾಗಿ ರೋಗಿ ವಿಪರೀತ ಬಳಲಿದಂತೆ ಕಾಣುತ್ತಾನೆ. ಒಂದೆರಡು ದಿವಸಗಳಾದ ಮೇಂಡಿಕೆ ಮತ್ತು ಸುತ್ತಲಿನ ಲೋಳ್ಪರೆಗಳಲ್ಲಿ ಹಳದಿ ಮತ್ತು ಕೆಂಪು ಮಿಶ್ರಿತ ಪೊರೆ ವ್ಯಾಪಿಸುತ್ತದೆ. ಈ ಪೊರೆಯನ್ನು ತೆಗೆದಾಗ ರಕ್ತಸ್ರಾವವಾಗುತ್ತದೆ. ಕತ್ತಿನಲ್ಲಿ ಬಾವುಬಂದು ಕತ್ತು ದಪ್ಪವಾಗುತ್ತದೆ. ಮತ್ತು ಮುಟ್ಟಿದರೆ ನೋವಾಗುತ್ತದೆ. ನಂಜು ಹೃದಯ, ಮೂತ್ರಪಿಂಡ ಮತ್ತು ನರಗಳನ್ನು ಕಾಡಿಸುತ್ತದೆ. ನಂಜಿನ ಪರಿಣಾಮವಾಗಿ ರೋಗಿಯು ಸಾವಿಗೆ ತುತ್ತಾಗುತ್ತಾನೆ. ಹಳದಿ ಮಿಶ್ರಿತ ಕೆಂಪು ಪೊರೆಯು ಧ್ವನಿಪೆಟ್ಟಿಗೆಯನ್ನು ಆಕ್ರಮಿಸಿದಾಗ ರೋಗಿಗೆ ಉಸಿರಾಡುವುದಕ್ಕೆ ತೊಂದರೆಯಾಗುತ್ತದೆ. ಇಂತಹ ಸಮಯದಲ್ಲಿ ಮೊದಲಿನಲ್ಲೇ ಶಸ್ತ್ರಚಿಕಿತ್ಸೆ ಮಾಡಿ., ಶ್ವಾಸನಾಳ ತೂತುಮಾಡಿ ಉಸಿರಾಡುವುದಕ್ಕಾಗಿ ತೊಂದರೆಯನ್ನು ತಪ್ಪಿಸಿದರೆ ಪ್ರಾಣಭಯ ಇರುವುದಿಲ್ಲ.

ಈ ರೋಗವನ್ನು ಯಶಸ್ವಿಯಾಗಿ ತಡೆಗಟ್ಟುವುದಕ್ಕೆ ಪ್ರತಿ ಮಕ್ಕಳಿಗೂ ತ್ರಿರೋಗ ನಿರೋಧ ಚುಚ್ಚುಮದ್ದನ್ನು (ಟ್ರಿಪಲ್ ಆ್ಯಂಟಿಜನ್) 6-7-8 ನೇ ತಿಂಗಳಲ್ಲಿ ಕೊಡಬೇಕು. ಅನಂತರ ಒಂದೂವರೆ ವರ್ಷವಾದಾಗ ಮತ್ತು ಮಗು ಶಾಲೆಗೆ ಸೇರುವಾಗ ಈ ಮದ್ದನ್ನು ಹಾಕಿಸಬೇಕು. ಈ ರೋಗವು ಸಮೀಪದ ಮನೆಗಳಲ್ಲಿದೆ ಎಂದು ತಿಳಿದ ಕೂಡಲೇ ಮಕ್ಕಳಿಗೆ ಈ ರೋಗನಿರೋಧಕ ಚುಚ್ಚುಮದ್ದನ್ನು ಮುಂಜಾಗ್ರತೆಯಾಗಿ ಹಾಕಿಸಬೇಕು.

ರೋಗ ತಗುಲಿದ ಅನುಮಾನ ಬಂದಕೂಡಲೇ ತಜ್ಞರಿಂದ ಪರೀಕ್ಷೆಮಾಡಿಸಬೇಕು. ರೋಗಿಗೆ ಪೂರ್ಣ ವಿಶ್ರಾಂತಿ ಕೊಡಬೇಕು.

ವಿಷಾಣುಗಳನ್ನು ಕೊಲ್ಲುವ ಚುಚ್ಚುಮದ್ದುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಡಬೇಕು. ಇದಕ್ಕೆ ರೋಗಿಯನ್ನು ಆಸ್ಪತ್ರೆಗೆ ಸೇರಿಸುವುದೊಳ್ಳೆಯದು. ತಜ್ಞವೈದ್ಯ ಮತ್ತು ದಾದಿಯರ ಸೇವೆ ಅಲ್ಲಿ ಸಿಗುವುದರಿಂದ ರೋಗ ಉಲ್ಬಣಾವಸ್ಥೆಗೆ ಹೋಗದಂತೆ ತಡೆಗಟ್ಟಬಹುದು. ''ಆಲಸ್ಯಂ ಅಮೃತಂ ವಿಷಂ'' ಎನ್ನುವ ನಾಣ್ಣುಡಿಯು ಈ ಕಾಯಿಲೆಗೆ ಅನ್ವಯಿಸಿದಂತೆ ಇನ್ನಾವ ಕಾಯಿಲೆಗೂ ಅನ್ವಯಿಸುವುದಿಲ್ಲ. ಇಷ್ಟಾದರೂ ನಮ್ಮ ದೇಶದಲ್ಲಿ ಈ ಕಾಯಿಲೆಗೊಳಗಾದ ಪ್ರತಿಶತ 30 ರೋಗಿಗಳು ಸಾವನ್ನಪ್ಪುತ್ತಿರುವುದು ದುರ್ದೈವದ ಸಂಗತಿ.

## (ಈ) ಧ್ವನಿಪೆಟ್ಟಿಗೆಯ ಕಾಯಿಲೆಗಳು

**ಕಾಯಿಲೆಯ ಲಕ್ಷಣಗಳು :** 1) ತಮ್ಮ ಧ್ವನಿಯನ್ನು ತಾವೇ ಮೆಚ್ಚಿಕೊಳ್ಳದಿರುವವರು ಅತಿವಿರಳ. ಇಂತಹ ಧ್ವನಿಯಲ್ಲಿ ಯಾವ ವ್ಯತ್ಯಾಸವಾದರೂ ಕಳವಳ ಪಡುವುದು ಸ್ವಾಭಾವಿಕ. ಧ್ವನಿಪೆಟ್ಟಿಗೆಯ ಯಾವ ಕಾಯಿಲೆಯೇ ಆಗಲಿ ಧ್ವನಿ ಬದಲಾಯಿಸುವುದು. ಗೊಗ್ಗರು ಧ್ವನಿ - ಈ ಬದಲಾವಣೆ ಧ್ವನಿಪೆಟ್ಟಿಗೆಯ ಕಾಯಿಲೆಗಳ ಪ್ರಪ್ರಥಮ ಹಂತಗಳಲ್ಲೆ ಉಂಟಾಗುವುದು. ಆದರೆ ಎಲ್ಲಾ ಧ್ವನಿ ಬದಲಾವಣೆಗಳು ಧ್ವನಿಕುಹರದ ಕಾಯಿಲೆಯಿಂದ ಬರುವುದಿಲ್ಲ. ಉದಾ:- ತೊದಲು, ನಾಲಿಗೆಯು ತೊಡಕಾಗುವುದು, ಗಂಟಲಿನಲ್ಲಿ ದುರ್ಮಾಂಸ ಬೆಳೆಯುವುದು, ಮೂಗಿನಲ್ಲಿ ಮಾತುಬಹುದು. ಅಥವಾ ಮಿದುಳಿನಲ್ಲಿ ರಕ್ತಹುಪ್ಪುಗಟ್ಟಿ ಪಾರ್ಶ್ವವಾಯು ಬರುವುದು. ಮಾತಿನ ಅಚ್ಚು ಅವಯುವ (Moulds of speech) ಗಳ

ತೊಂದರೆಯಿಂದ ಆಗುತ್ತದೆ. ಆದ್ದರಿಂದ ಧ್ವನಿ ಬದಲಾವಣೆಯಾದಾಗ ಅದು ವಾರಕ್ಕಿಂತ ಜಾಸ್ತಿಪಟ್ಟು ಹಿಡಿದರೆ, ತಜ್ಞರಿಂದ ಪರೀಕ್ಷೆ ಮಾಡಿಸಿಕೊಳ್ಳುವುದು ಕ್ಷೇಮಕರ. 2) ಸುಂಯ್ಗುಡುವ ಮುಖ್ಯ ಲಕ್ಷಣ. ಉಸಿರು ತೆಗೆದುಕೊಳ್ಳುವಾಗ ಸುಂಯ್ಗುಡುವುದು ಜಾಸ್ತಿ. 3) ನುಂಗುವಾಗ ತಡೆಯಾಗುವುದು, ಗಂಟಲಿನಲ್ಲಿ ಸಿಕ್ಕಿಹಾಕಿಕೊಳ್ಳುವುದು, ತೆರೆದುಕೊಂಡು ಹೋದಂತೆ ಆಗುವುದು, ಅಥವಾ ನುಂಗುವಾಗ ನೋವಾಗುವುದು- ಇವು ಕೂಡ ಧ್ವನಿಪೆಟ್ಟಿಗೆಯ ಕಾಯಿಲೆಯ ಲಕ್ಷಣಗಳು. 4) ಧ್ವನಿ ಪೆಟ್ಟಿಗೆಯ ಜೊತೆ ಶ್ವಾಸನಾಳಗಳಿಗೂ ಕಾಯಿಲೆಯಾದಾಗ ಒಣಕೆಮ್ಮಲು, ಕಫ ಬರಬಹುದು. ಮತ್ತು ಕಫದಲ್ಲಿ ರಕ್ತ ಬರುವುದು ತೋರುತ್ತದೆ.

**ಧ್ವನಿ ಪೆಟ್ಟಿಗೆಯ ಉರಿಯೂತ** : ನೆಗಡಿಯಾದಾಗ ಧ್ವನಿ ಭಾರವಾಗುವುದು ಸರ್ವೇಸಾಮಾನ್ಯ. ಇದು ಧ್ವನಿ ಪೆಟ್ಟಿಗೆಯ ಲೋಳ್ಪರೆಯ ಉರಿಯೂತದಿಂದ ಉಂಟಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಹೆಚ್ಚಾಗಿ ಮಾತನಾಡುವುದು, ಮದ್ಯಸೇವನೆ ಮಾಡುವುದು, ತಂಬಾಕು, ಸಿಗರೇಟು ವಗೈರೆ ಸೇದುವುದು- ಇವುಗಳಿಂದ ಉರಿಯೂತ ತೀವ್ರತರವಾಗುತ್ತದೆ. ಮಾತನಾಡಲು ಆಗದೆ ಮಾತೇ ಕ್ಷೀಣವಾಗುತ್ತದೆ ಮತ್ತು ಮಾತನಾಡುವಾಗ ನೋವು ಆಗುತ್ತದೆ. ಧ್ವನಿಪೆಟ್ಟಿಗೆಗೆ ಪೂರ್ತಿ ವಿಶ್ರಾಂತಿ ಕೊಡುವುದೇ ಇದಕ್ಕೆ ಚಿಕಿತ್ಸೆ. ಅಂದರೆ ರೋಗಿಯು ಮಾತನ್ನೇ ಆಡಬಾರದು. ನಿರ್ವಾಹವಿಲ್ಲದಾಗ ಪಿಸುಮಾತಿನಲ್ಲಿ ಆಡಬೇಕು. ನೆಗಡಿಗೆ ಮಾಡುವ ಚಿಕಿತ್ಸೆಯನ್ನೇ ಮಾಡಬೇಕು. ಹೀಗೆ ಮಾಡಿದಲ್ಲಿ ಉರಿಯೂತ ಸಂಪೂರ್ಣ

ವಾಗಿ ಕಮ್ಮಿಯಾಗುತ್ತದೆ. ಧ್ವನಿಯು ಮೊದಲಿನ ಸ್ಥಿತಿಗೆ 4-5 ದಿನಗಳಲ್ಲಿ ಬರುತ್ತದೆ. ಇಲ್ಲದಿದ್ದರೆ ಕೆಲವು ಸಾರೆ ಬದಲಾದ ಧ್ವನಿಯೇ ನಿಂತುಹೋಗುತ್ತದೆ.

ಚಿಕ್ಕಮಕ್ಕಳಲ್ಲಿ ಈ ಉರಿಯೂತದಿಂದ ಲೋಳ್ಪರೆಯು ಉಬ್ಬಿ ಉಸಿರಾಟಕ್ಕೆ ತೊಂದರೆಯಾಗಬಹುದು (ಸುಂಯ್ಗುಡುವುದು). ಅಂತಹ ಸ್ಥಿತಿಯಲ್ಲಿ ಹೆಚ್ಚು ಜಾಗರೂಕತೆ ಅವಶ್ಯ. ಉಸಿರಾಟಕ್ಕೆ ತೊಂದರೆ ಜಾಸ್ತಿಯಾಗದಂತೆ ಸೂಜಿಮದ್ದುಗಳನ್ನು ಕೊಡಬೇಕು. ಉಪಶಮನ ಔಷಧಿಗಳನ್ನು ಸೇವಿಸಬೇಕು. ಅಲ್ಲಿಗೂ ಉಸಿರಾಟದ ತೊಂದರೆಯಿದ್ದರೆ ಶ್ವಾಸನಾಳದಲ್ಲಿ ತಾತ್ಕಾಲಿಕ ಶಸ್ತ್ರಚಿಕಿತ್ಸೆ ಮಾಡಬೇಕಾಗುವುದು.

ಧ್ವನಿಪೆಟ್ಟಿಗೆಯ ಕ್ಷಯರೋಗ ನಮ್ಮಲ್ಲಿ ಬಹಳವಾಗಿ ಇದೆ. ಕೆಲವು ಸಾರಿ ಪುಪ್ಪುಸರೋಗದ ಲಕ್ಷಣಗಳಿಗಿಂತ ಧ್ವನಿ ಪೆಟ್ಟಿಗೆಯ ರೋಗದ ಲಕ್ಷಣಗಳು ಮೊದಲು ಕಾಣಿಸಿಕೊಳ್ಳಬಹುದು. ಇವರು ಊಟಮಾಡುವಾಗ ವಿಪರೀತ ನೋವಿನಿಂದ ಬಳಲುತ್ತಾರೆ. ಹಾಗೂ ಗಂಟಲು ಉರಿ ಎಂದು ಹೇಳುತ್ತಾರೆ. ಧ್ವನಿಪೆಟ್ಟಿಗೆಯ ಮೃದ್ವಸ್ಥಿಗಳು ಅರ್ಧಂಬರ್ಧ ನಾಶವಾಗಿ ಲೋಳ್ಪರೆಯಲ್ಲಿ ಸಣ್ಣ ಸಣ್ಣ ಹುಣ್ಣುಗಳು ಇರುತ್ತವೆ. ಕ್ಷಯರೋಗ ನಿವಾರಕ ಸೂಜಿ ಮದ್ದುಗಳ ಜೊತೆಗೆ ನೋವನ್ನು ಕಡಿಮೆ ಮಾಡುವದಕ್ಕೆ ಸ್ಥಳೀಯವಾಗಿ ಅರಿವಳಿಕೆ ಔಷಧಗಳನ್ನು ಕೊಡಬೇಕು. ಇಂಥವರು ಸುಮಾರು 6 ತಿಂಗಳ ಕಾಲ ಹುಣ್ಣು ಪೂರ್ತಿ ಮಾಯುವ ತನಕ ಮಾತನಾಡಬಾರದು. ಧ್ವನಿಯನ್ನೇ ವೃತ್ತಿಯನ್ನಾಗಿಟ್ಟುಕೊಂಡಿರುವ ಮೇಷ್ಟರುಗಳು,

ಸಂಗೀತಗಾರರು, ವಕೀಲರು ಮತ್ತು ಮಾರಾಟಗಾರರು (ದಾರಿ) ಇವರುಗಳಲ್ಲಿ ಧ್ವನಿಪೆಟ್ಟಿಗೆಯ ಉರಿಯೂತ ಬೇರೂರಿಬಿಡುತ್ತದೆ. ಸಂಗೀತಗಾರರಿಗಂತೂ ಇದೊಂದು ಶಾಪವಾಗಿ ಪರಿಣಮಿಸುತ್ತದೆ. ಇದರಲ್ಲಿ ಧ್ವನಿ ತಂತಿಗಳಲ್ಲಿ ಕಾಯಿಗಳು ಬೆಳೆಯುತ್ತದೆ. ಇವುಗಳನ್ನು ಬಹಳ ಜಾಗರೂಕತೆಯಿಂದ ಶಸ್ತ್ರಚಿಕಿತ್ಸೆ ಮಾಡಿ ತೆಗೆಯಬೇಕು. ಉರಿಯೂತವನ್ನು ಹೆಚ್ಚು ಮಾಡುವ ಖಾದ್ಯ ಪದಾರ್ಥಗಳು, ಸಿಗರೇಟು ವಗೈರೆ ಸೇದುವುದು ಇವುಗಳನ್ನು ವರ್ಜಿಸಬೇಕು.

**ಸುಂಯ್ಗುಡುವ ಉಸಿರಾಟ (ಕರ್ಕಶ ಉಸಿರಾಟ, ಕೀರ್ಗುಡುವ ಉಸಿರಾಟ):** ಇದು ನಾನಾ ಕಾರಣಗಳಿಂದ ಬರುತ್ತದೆ. ಮತ್ತು ಕೆಲವು ವೇಳೆ ಬಹಳ ಗಾಬರಿಪಡಿಸುವಂತಾಗಿದ್ದು, ಕೆಲವು ವೇಳೆ ಸಮಯಕ್ಕೆ ಸರಿಯಾದ ಚಿಕಿತ್ಸೆ ದೊರೆಯದಿದ್ದರೆ ಪ್ರಾಣಾಪಾಯವೂ ಉಂಟಾಗುತ್ತದೆ.

ಚಿಕ್ಕಮಕ್ಕಳಲ್ಲಿ ದನಿನಾಳ ಸೆಟೆತ, ದನಿನಾಳದಲ್ಲಿ ಪದರವಿರುವುದು ಅಥವಾ ಕಾಯಿಗಳು ಬೆಳೆದುಕೊಂಡಿರುವುದು ಮತ್ತು ಸೆಟೆಬೇನೆಗಳಿಂದ ಶ್ವಾಸನಾಳಗಳಿಗೆ ಅಡಚಣೆಯುಂಟಾಗಿ ಸುಂಯ್ಗುಡುವ ಉಸಿರಾಟ ಉಂಟಾಗುತ್ತದೆ. ತಜ್ಞರಿಂದ ಪರೀಕ್ಷೆ ಮಾಡಿಸಿ ನಿವಾರಣೋಪಾಯ ಕಂಡುಹಿಡಿಯಬೇಕು.

ಧ್ವನಿಪೆಟ್ಟಿಗೆಯ ತೀವ್ರತರ ಉರಿಯೂತ, ಗಂಟಲುಮಾರಿ ಮತ್ತು ಲಕ್ವದಿಂದಲೂ ಇದ್ದಕ್ಕಿದ್ದ ಹಾಗೆ ಕರ್ಕಶ ಉಸಿರಾಟ ಬರಬಹುದು.

ಅನ್ನ ಪದಾರ್ಥಗಳು ಗಂಟಲಿನಲ್ಲಾಗಲೀ, ಅನ್ನನಾಳದಲ್ಲಾಗಲಿ ಅಥವಾ ದನಿನಾಳದಲ್ಲಾಗಲಿ ಸಿಕ್ಕಿಹಾಕಿಕೊಳ್ಳಬಹುದು. ಈ ರೀತಿ ದನಿನಾಳದಲ್ಲಿ ಸಿಕ್ಕಿಕೊಂಡಾಗ ಸುಂಯ್ಗುಡುವ ಉಸಿರಾಟ ಶುರುವಾಗಿ ತೀವ್ರ ಪ್ರಾಣಾಪಾಯ ಬರುವ ಸಂಭವವಿದೆ. ಅದಕ್ಕೋಸ್ಕರವಾಗಿಯೇ ಏನೋ ಹಿಂದಿನ ಕಾಲದವರು ಊಟ ಮಾಡುವಾಗ ಮಾತನಾಡಬೇಡ ಎಂದು ಹೇಳುತ್ತಿದ್ದರು. ದೊಡ್ಡವರಲ್ಲಿ ಈ ರೀತಿ ಉಸಿರಾಟದ ತೊಂದರೆಗೆ ಅತಿಮುಖ್ಯವಾದ ಕಾರಣವೆಂದರೆ ಕ್ಯಾನ್ಸರ್.

ಸುಂಯ್ಗುಡುವ ಉಸಿರಾಟದ ಜೊತೆಗೆ ರೋಗಿಯು ಉಸಿರು ತೆಗೆದುಕೊಳ್ಳುವಾಗ ಬಹಳ ಕಷ್ಟಪಡುತ್ತಾನೆ. ಎದೆ ಎಲುಬಿನ ಸ್ನಾಯುಗಳು ಒಳಕ್ಕೆ ಎಳೆದುಕೊಂಡಿರುತ್ತವೆ. ನಾಲಿಗೆ ಉಗುರುಗಳು ನೀಲಿಯಾಗಲೂಬಹುದು. ಹೀಗಿರುವ ಲಕ್ಷಣಗಳು ಕಂಡುಬಂದಾಗ ಶ್ವಾಸನಾಳದಲ್ಲಿ ತುರ್ತುಚಿಕಿತ್ಸೆ ಮಾಡಿ ಉಸಿರಾಟವನ್ನು ಸರಿಪಡಿಸಬೇಕು.

# ಅಧ್ಯಾಯ - 5

# ಕಿವಿ, ಮೂಗು, ಗಂಟಲಿನ ಕ್ಯಾನ್ಸರ್ ರೋಗದ ಮುಖ್ಯ ಲಕ್ಷಣಗಳು.

ದೇಹದ ಇತರ ಭಾಗಗಳಲ್ಲಿ ಬರುವ ಹಾಗೆ ಕಿವಿ, ಮೂಗು, ಗಂಟಲಿನ ಕ್ಯಾನ್ಸರ್ (ಏಡಿಹುಣ್ಣು, ಅರ್ಬುದ) ಕೂಡ ಸಾಮಾನ್ಯವಾಗಿ 40 ವರ್ಷ ಮೇಲ್ಪಟ್ಟವರಿಗೆ ಬರುತ್ತದೆ. ಕೆ.ಎಂ.ಸಿ. ಆಸ್ಪತ್ರೆಗೆ ಬರುವ ಕ್ಯಾನ್ಸರ್‌ಗಳಲ್ಲಿ ಪ್ರತಿಶತ 20 ಕಿವಿ, ಮೂಗು, ಗಂಟಲಿಗೆ ಸಂಬಂಧಿಸಿದ್ದು. ಇವುಗಳಲ್ಲಿ ಗಂಟಲಿನ, ಮೂಗು ಮತ್ತು ಮೂಗು ಕುಹರಗಳ ಕ್ಯಾನ್ಸರ್ ಕಿವಿಯ ಕ್ಯಾನ್ಸರ್‌ಗಿಂತ ಹೆಚ್ಚಿರುತ್ತದೆ. ಹೆಚ್ಚಾಗಿ ಬೀಡಿ ಸೇದುವುದು, ಬೀಡಿ ಉರಿಯುವ ತುದಿಯನ್ನು ಬಾಯಲ್ಲಿ ಇಟ್ಟುಕೊಳ್ಳುವುದು, ಹೊಗೆಸೊಪ್ಪು ಅಗಿಯುವುದು ಮತ್ತು ಯಾವಾಗಲೂ ಅಡಿಕೆ ಜಗಿಯುವುದು - ಇವುಗಳು ಗಂಟಲಿನ ಕ್ಯಾನ್ಸರ್‌ಗೆ ಕಾರಣಗಳೆಂದು ಊಹಿಸಲಾಗಿದೆ.

ಪ್ರಥಮ ಹಂತಗಳಲ್ಲಿ ಕ್ಯಾನ್ಸರ್‌ನ್ನು ಕಂಡುಹಿಡಿದರೆ ಆ ಭಾಗವನ್ನು ಶಸ್ತ್ರಚಿಕಿತ್ಸೆಯಿಂದಾಗಲೀ, ಕ್ಷ- ಕಿರಣಗಳಿಂದಾಗಲೀ ಯಶಸ್ವಿಯಾಗಿ ಗುಣಪಡಿಸಬಹುದು. ಉಲ್ಬಣಾವಸ್ಥೆಗೆ ಬಂದ ಮೇಲೆ ಈ ಎರಡು ಚಿಕಿತ್ಸೆಗಳೂ ಪ್ರಯೋಜನಕಾರಿಯಾಗುವದಿಲ್ಲ. ರೋಗಿಯು ಇರುವಷ್ಟು ದಿನ (8-10 ತಿಂಗಳಿಂದ 1-2 ವರ್ಷಗಳವರೆಗೆ) ವಿಪರೀತ ಬಾಧೆಯನ್ನು ಅನುಭವಿಸಬೇಕಾಗುತ್ತದೆ. ಆದ್ದ

ರಿಂದ ಅನುಮಾನಾಸಾವಸ್ಥೆಯಲ್ಲಿರುವಾಗಲೇ ತಜ್ಞರಿಂದ ಪರೀಕ್ಷೆ ಮಾಡಿಸಿಕೊಳ್ಳಬೇಕು.

## ಕಿವಿಯ ಕಾನ್ಸರ್‌ನ ಲಕ್ಷಣಗಳು

ವರ್ಷಾನುಗಟ್ಟಲೇ ಸೋರುತ್ತಿರುವ ಕಿವಿಯಲ್ಲಿ ಕ್ರಮೇಣ ರಕ್ತಸ್ರಾವವಾಗುವುದು. ಕಿವಿಯಲ್ಲಿ, ಕಿವಿಯ ಹಿಂದೆ ಬಾವು ಬರುವುದು, ಕಿವಿಯೊಳಗೆ ಮಂದವಾದ ನೋವು ಬರುವುದು, ಮತ್ತು ಸೋರುತ್ತಿರುವ ಕಿವಿಯ ಭಾಗದ ಮುಖದ ಸ್ನಾಯುಗಳಿಗೆ ಲಕ್ವ ಹೊಡೆಯುವುದು. ಈ ರೀತಿಯ ಚಿಹ್ನೆಗಳು ಕಾಣಿಸಿಕೊಂಡಾಗ ಕೂಡಲೇ ತಜ್ಞರಿಂದ ಪರೀಕ್ಷೆ ಮಾಡಿಸಬೇಕು. ಪ್ರಥಮ ಹಂತಗಳಲ್ಲಿ ಶಸ್ತ್ರ ಚಿಕಿತ್ಸೆ ಮಾಡಬಹುದು (ಚಿತ್ರ 3 ಮತ್ತು 4.)

## ಮೂಗಿನ ಕಾನ್ಸರ್‌ನ ಲಕ್ಷಣಗಳು

ವಯಸ್ಸಾದವರಲ್ಲಿ ಅಂದರೆ 40 ವರ್ಷ ಮೇಲ್ಪಟ್ಟವರಲ್ಲಿ

1) ಮೂಗಿನಲ್ಲಿ ತಾನೇತಾನಾಗಿ ರಕ್ತಸ್ರಾವವಾಗುವುದು, ಅದರಲ್ಲೂ ಒಂದೇ ಹೊಳ್ಳೆಯಿಂದ ಸೋರುವುದು.

2) ಮೂಗಿನಲ್ಲಿ ಬಾವು ಬಂದು ಉಸಿರಾಡಿಸುವುದಕ್ಕೆ ತೊಂದರೆಯಾಗುವುದು ಹಾಗೂ ಈ ತೊಂದರೆಯು ಕ್ರಮೇಣ ಹೆಚ್ಚುತ್ತಾ ಹೋಗುವುದು.

3) ಮುಖದಲ್ಲಿ ಚಳುಕಿನಂಥ ನೋವಾಗುವುದು.

4) ಮುಖದ ಮೇಲೆ ಬಾವು ಬರುವುದು.

5) ಕಣ್ಣುಗಳು ಸಣ್ಣದಾಗುವುದು.

6) ಹಲ್ಲುಗಳು ಸಡಿಲವಾಗಿ ಬೀಳುವುದು.

ಈ ಮೇಲೆ ಹೇಳಿದ ಸೂಚನೆಗಳು ಕಂಡಕೂಡಲೇ ತಜ್ಞರಿಂದ ಪರೀಕ್ಷೆ ಮಾಡಿಸುವುದು ಒಳ್ಳೆಯದು. ಏಕೆಂದರೆ ಕಾಯಿಲೆ ಪ್ರಪ್ರಥಮ ಹಂತದಲ್ಲಿದ್ದರೆ ಶಸ್ತ್ರ ಚಿಕಿತ್ಸೆಯಾಗಲೀ, ಕ್ಷಕಿರಣವಾಗಲೀ ಸಹಾಯಕವಾಗಬಲ್ಲವು. ಆ ಹಂತವನ್ನು ಮೀರಿದರೆ ಬಹಳ ತೊಂದರೆಗೊಳಗಾಗಬೇಕಾಗುತ್ತದೆ. ಅತಿ ದುಬಾರಿಯಾದರೂ ಮಾಡಿಸಲೇಬೇಕು (ಚಿತ್ರ 5.)

## ಗಂಟಲಿನ ಕಾನ್ಸರ್‌ನ ಲಕ್ಷಣಗಳು

ಗಂಟಲಿನ ಕ್ಯಾನ್ಸರ್‌ನ ಚಿಹ್ನೆಗಳು ಬಹಳ ದಿನಗಳವರೆಗೆ ಗೌಪ್ಯವಾಗಿರುತ್ತವೆ. ಕುತ್ತಿಗೆಯಲ್ಲಿ ಬಾವು ಬಂದರೂ ಕೂಡ ಗಂಟಲಿನ ಒಳಗೆ ಕೆಲವು ಸಮಯ ಏನೂ ತೊಂದರೆಯಿರುವುದಿಲ್ಲ. ಈ ಕೆಳಗೆ ತಿಳಿಸಿದ ಕೆಲವು ಲಕ್ಷಣಗಳು ಅನುಮಾನಕ್ಕೆ ಅವಕಾಶ ಮಾಡಿಕೊಡುತ್ತವೆ. ಆಗ ಕೂಡಲೇ ತಜ್ಞರಿಗೆ ತೋರಿಸುವುದು ಯೋಗ್ಯ ಉಪಾಯ.

1) ಗಂಟಲಿನಲ್ಲಿ ಒಂದೇ ಸಮನಾಗಿ ಒಂದೇ ಜಾಗದಲ್ಲಿ ಕೆರೆತ ಉಂಟಾಗುವುದು.

2) ಊಟ ಮಾಡುವಾಗ ತೆರೆದುಕೊಂಡಂತೆ ಭಾಸವಾಗುವುದು.

3) ಏನೋ ಒಂದು ಅನ್ನ ಪದಾರ್ಥ ಗಂಟಲಿನಲ್ಲಿ ಇರುವಂತೆ ಭಾಸವಾಗುವುದು.

4) ಕ್ಯಾಕರಿಸಿ ಉಗುಳಿದಾಗ ರಕ್ತ ಬೀಳುವುದು.

5) ಧ್ವನಿ ಬದಲಾವಣೆಯಾಗುವುದು.

6) ಕತ್ತಿನಲ್ಲಿ ಬಾವು ಬರುವುದು.

7) ಕಾರಣವಿಲ್ಲದೇ ಕಿವಿಯಲ್ಲಿ ನೋವು ಬರುವುದು.

ಕಾಯಿಲೆ ಉಲ್ಬಣಾವಸ್ಥೆಗೆ ಹೋದಾಗ ಈ ಕೆಳಗಿನ ಲಕ್ಷಣಗಳು ಕಾಣಿಸಿಕೊಳ್ಳುವುವು:

1) ಗಂಟಲಿನಲ್ಲಿ ತುಂಬಾ ನೋವು.

2) ಉಸಿರಾಡಿಸುವುದಕ್ಕೆ ತೊಂದರೆ ಆಗಿ ಕರ್ಕಶ ಉಸಿರಾಟ ಶುರುವಾಗುವುದು.

3) ಉಗುಳು ನುಂಗುವುದಕ್ಕೆ ತೊಂದರೆ ಆಗುವುದು.

4) ಕುತ್ತಿಗೆಯಲ್ಲಿನ ಬಾವು ಒಡೆದು ರಕ್ತ ಮತ್ತು ಕೀವು ಸೋರುವುದು.

ಅನುಮಾನ ಬಂದಾಗ ಜಾಗರೂಕತೆಯಿಂದ ತಜ್ಞರ ಬಳಿ ಪರೀಕ್ಷೆ ಮಾಡಿಸಿ ಕ್ಯಾನ್ಸರ್ ಕಾಯಿಲೆ ಇದೆಯೇ ಇಲ್ಲವೇ ಎನ್ನುವುದನ್ನು ನಿಷ್ಕರ್ಷಿಸಬೇಕು. ಈ ಮೊದಲೇ ಸೂಚಿಸಿದಂತೆ ಗಂಟಲಿನ ಭಾಗದ ಕ್ಯಾನ್ಸರನ್ನು ಅದರಲ್ಲೂ ಧ್ವನಿಪೆಟ್ಟಿಗೆಯ ಕ್ಯಾನ್ಸರನ್ನು

ಪ್ರಥಮ ಹಂತದಲ್ಲಿಯೇ ಗುರುತಿಸಿ ತಜ್ಞ ವೈದ್ಯರಿಂದ ಕ್ಷ-ಕಿರಣಗಳಿಂದಾಗಲೀ, ಶಸ್ತ್ರಚಿಕಿತ್ಸೆಯಿಂದಾಗಲೀ ಚಿಕಿತ್ಸೆ ಮಾಡಿಸಿದರೆ ಈ ರೋಗವನ್ನು ಸಂಪೂರ್ಣ ಗುಣಪಡಿಸಬಹುದು (ಚಿತ್ರ 6-7). ಸಕಾಲದಲ್ಲಿ ಚಿಕಿತ್ಸೆ ಮಾಡದಿದ್ದರೆ ಅಥವಾ ಆಲಸ್ಯವಾದರೆ ರೋಗಿಯು 8-10 ತಿಂಗಳಲ್ಲಿ ಸಾವನ್ನಪ್ಪುವುದು ಖಂಡಿತ. ಈ ಅವಧಿಯಲ್ಲಿ ಕೂಡ ಆ ರೋಗಿ ವಿಪರೀತ ನೋವಿನಿಂದ ನರಳುತ್ತಾನೆ.

# ಅಧ್ಯಾಯ - 6

# ಕಿವಿ, ಮೂಗು, ಗಂಟಲಿನಲ್ಲಿ ಅನ್ಯ ಪದಾರ್ಥಗಳು

ಕಿವಿ, ಮೂಗು, ಗಂಟಲಿನಲ್ಲಿ ಅನ್ಯ ಪದಾರ್ಥಗಳನ್ನು ಹಾಕಿಕೊಳ್ಳುವುದು ಸರ್ವೇಸಾಮಾನ್ಯ. ಅದರಲ್ಲೂ ಚಿಕ್ಕ ಮಕ್ಕಳು ಮತ್ತು ಹುಡುಗರು ಇದನ್ನು ವಿಪರೀತವಾಗಿ ಮಾಡುತ್ತಾರೆ. ದೊಡ್ಡವರೂ ಕೂಡ ಕೆಲವೊಮ್ಮೆ ಈ ಬಗೆಯ ಅಜಾಗರೂಕತೆಗೆ ಸಿಲುಕುತ್ತಾರೆ.

ಕಿವಿಯಲ್ಲಿ ಸೇರಿದ ಅನ್ಯ ಪದಾರ್ಥಗಳು : ಸಾಮಾನ್ಯವಾಗಿ ಮಕ್ಕಳು ನಿದ್ರಿಸುವಾಗ ಜಿರಳೆ, ಜೊಂಡಿಗ, ಸಾವಿರಕಾಲು ಈ ತರಹದ ಕೀಟಗಳು ಕಿವಿಯಲ್ಲಿ ಹೋಗುತ್ತವೆ. ಆ ರೀತಿಯಾದಾಗ ಕಿವಿಯಲ್ಲಿ ಕಿರಿಕಿರಿ ಮತ್ತು ವಿಚಿತ್ರವಾದ ವೇದನೆಯುಂಟಾಗುತ್ತದೆ. ಇದು ಒಂದು ತುರ್ತು ಪರಿಸ್ಥಿತಿ. ಉಪ್ಪು ನೀರನ್ನಾಗಲೀ, ಎಣ್ಣೆಯನ್ನಾಗಲೀ ಹಾಕಿದರೆ ಕೀಟಗಳು ಸತ್ತುಹೋಗುತ್ತವೆ. ಹಾಗೆ ಮಾಡದೇ ನೇರವಾಗಿ ಈ ಕೀಟಗಳನ್ನು ಚಿಮಟದಿಂದ ಹಿಡಿಯುವ ಪ್ರಯತ್ನ ಮಾಡಬಾರದು. ಹೀಗೆ ಒಳಸೇರಿದ ಅನ್ಯಪದಾರ್ಥಗಳಿಗಿಂತಲೂ, ಸರಿಯಾದ ಉಪಕರಣಗಳಿಲ್ಲದೆ ಆ ಪದಾರ್ಥಗಳನ್ನು ತೆಗೆಯುವುದರಿಂದ ಅನಾಹುತಗಳು ಜಾಸ್ತಿ ಯಾಗುತ್ತವೆ.

ಯಾಗುತ್ತವೆ. ದೊಡ್ಡವರು ಕಿವಿಯನ್ನು ಕಡ್ಡಿ ಮತ್ತಿತರ ಪದಾರ್ಥಗಳಿಂದ ಕೆರೆದುಕೊಳ್ಳುತ್ತಾರೆ. ಇಂತಹ ಸಮಯದಲ್ಲಿ ಕಡ್ಡಿ ಮುರಿದು ಕಿವಿಯೊಳಗೆ ಉಳಿದುಕೊಳ್ಳುತ್ತದೆ. ಆಗ ಆ ಪದಾರ್ಥಗಳನ್ನು ತಾವೇ ತೆಗೆಯುವುದಕ್ಕೆ ಪ್ರಯತ್ನ ಮಾಡದೆ ವೈದ್ಯರಿಂದ ತೆಗೆಯಿಸಿಕೊಳ್ಳುವುದೊಳ್ಳೆಯದು. ಬಹಳಷ್ಟು ಪದಾರ್ಥಗಳನ್ನು ಪಿಚಕಾರಿ ಹೊಡೆಯುವುದರಿಂದ ತೆಗೆಯಬಹುದು. ಚಿಕ್ಕ ಮಕ್ಕಳನ್ನು ಹಿಡಿದುಕೊಳ್ಳುವುದಕ್ಕೆ ಆಗದಿದ್ದರೆ ಅರಿವು ತಪ್ಪಿಸಿ ಇಂತಹ ಪದಾರ್ಥಗಳನ್ನು ಹೊರ ತೆಗೆಯಬೇಕು (ಚಿತ್ರ -8.)

## ಮೂಗಿನಲ್ಲಿ ಸಿಕ್ಕಿಕೊಂಡ ಅನ್ಯ ಪದಾರ್ಥಗಳು

ಮೂಗಿನಲ್ಲಿ ಹುಡುಗರು ಹುಣಸೀ, ಶೇಂಗಾ ಇತ್ಯಾದಿ ಬೀಜಗಳನ್ನು, ಮಣಿ, ಮುತ್ತು, ಪೆನ್ಸಿಲ್‌ಚೂರು ಇವುಗಳನ್ನು ಹಾಕಿಕೊಳ್ಳುತ್ತಾರೆ. ಹೆದರಿಕೆಯಿಂದ ದೊಡ್ಡವರಿಗೆ ತಿಳಿಸದೇ ಕೆಲವು ವೇಳೆ ಹೀಗೆ ಸಿಕ್ಕಿಹಾಕಿಕೊಂಡ ಪದಾರ್ಥ ಒಳಗೇ ಉಳಿದು ಸೋರುವುದಕ್ಕೆ ಪ್ರಾರಂಭವಾಗುತ್ತದೆ. ಈ ಪದಾರ್ಥಗಳನ್ನು ತೆಗೆಯುವುದು ಸುಲಭವೆನಿಸಿದರೂ ಸರಿಯಾದ ಉಪಕರಣಗಳಿಲ್ಲದೇ ತೆಗೆದರೆ ರಕ್ತಸ್ರಾವ ಮತ್ತಿತರ ಅನಾಹುತಗಳಾಗುತ್ತವೆ. ಕೆಲವೊಮ್ಮೆ ಚಿಕ್ಕವರಿದ್ದಾಗ ಮೂಗಿನಲ್ಲಿ ಹಾಕಿಕೊಂಡ ಅನ್ಯ ಪದಾರ್ಥಗಳನ್ನು ಹೊರತೆಗೆಯದೇ ಮರೆತಾಗ ಈ ಪದಾರ್ಥಗಳ ಸುತ್ತ ಕ್ಯಾಲ್ಸಿಯಂ ಮತ್ತಿತರ ಲವಣಗಳು ಸೇರಿ ಮೂಗಿನಲ್ಲಿ ಕಲ್ಲಾಗುತ್ತದೆ (Rhinolith). ಇದನ್ನು ಶಸ್ತ್ರ ಚಿಕಿತ್ಸೆಯಿಂದ ತೆಗೆಯಬೇಕಾಗುತ್ತದೆ.

## ಗಂಟಲಿನಲ್ಲಿ ಅಡ್ಡಬಿದ್ದ ಅನ್ಯಪದಾರ್ಥಗಳು

ಗಂಟಲಿನಲ್ಲಿ ಅನ್ಯಪದಾರ್ಥಗಳು ಸಿಕ್ಕಿಕೊಳ್ಳುವುದು ಸರ್ವವಿದಿತ. ಅವಸರದಲ್ಲಿ ಊಟಮಾಡುವುದು, ಊಟಮಾಡುವಾಗ ಜೋರಾಗಿ ನಗುವುದು, ಕೇಕೇ ಹಾಕುವುದರಿಂದ ಈ ಪದಾರ್ಥಗಳು ಗಂಟಲಿನಲ್ಲಿ ಸಿಕ್ಕಿಕೊಳ್ಳುತ್ತವೆ. ಇವುಗಳಲ್ಲಿ ಮುಖ್ಯವೆಂದರೆ ಮೀನಿನ ಮೂಳೆ, ಮಾಂಸದ ತುಂಡು, ಊಟದಲ್ಲಿರುವ ಕಸಕಡ್ಡಿ ಮತ್ತು ಕೃತಕ ಹಲ್ಲುಗಳು ಹೀಗೆ ಅನ್ಯ ಪದಾರ್ಥಗಳು ಸಿಕ್ಕಿಹಾಕಿಕೊಂಡಾಗ ಅದರ ಸುತ್ತ ಉರಿಯೂತವಾಗುತ್ತದೆ. ಮುಂದೆ ಬಾವು ಬಂದು ಎಂಜಲನ್ನು ನುಂಗುವುದಕ್ಕೂ ಆಗುವುದಿಲ್ಲ. ಅರಿವು ತಪ್ಪಿಸಿ ಇವುಗಳನ್ನು ತೆಗೆಯಬೇಕು.

ಶ್ವಾಸನಾಳದಲ್ಲಿ ಒಳಸೇರುವ ಸಾಮಾನ್ಯ ಅನ್ಯಪದಾರ್ಥಗಳೆಂದರೆ ಹಸಿರು ಸಂಬಂಧವಾದ ಕಡಲೆ, ಶೇಂಗಾ ಬೀಜಗಳು, ಅಡಿಕೆಚೂರು, ಮಣಿ, ಮುತ್ತು, ಮತ್ತು ಸಣ್ಣ ನಾಣ್ಯಗಳು. ಅದಕ್ಕೆ ಮುಖ್ಯ ಕಾರಣ ಅಲಕ್ಷ್ಯತನ. ಕೆಲವರು ಕಡಲೆ ಬೀಜವನ್ನು ಮೇಲಕ್ಕೆ ತೂರಿ ಬಾಯಿ ತೆಗೆದು ಬೀಜವನ್ನು ಬಾಯಲ್ಲಿ ಹಿಡಿದುಕೊಳ್ಳುತ್ತಾರೆ. ಹೀಗೆ ಮಾಡುವಾಗ ಕೆಲವೊಮ್ಮೆ ಅನ್ನ ನಾಳಕ್ಕೆ ಹೋಗುವ ಬದಲು ಆ ಬೀಜ ಶ್ವಾಸನಾಳದಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ.

ಈ ಅನ್ಯಪದಾರ್ಥಗಳು ಧ್ವನಿಪೆಟ್ಟಿಗೆಗಿಂತ ಶ್ವಾಸನಾಳದಲ್ಲಿ ಹೆಚ್ಚಾಗಿ ಸಿಕ್ಕಿಹಾಕಿಕೊಳ್ಳುತ್ತವೆ. ಹಸಿರು ಸಂಬಂಧವಾದ ಬೀಜಗಳು ತೀವ್ರತರ ಉರಿಯೂತವನ್ನುಂಟುಮಾಡುವುದರಿಂದ ಹೆಚ್ಚು ಪ್ರಾಣಪಾಯಕಾರಿ. ಅನ್ಯ ಪದಾರ್ಥಗಳು ಶ್ವಾಸನಾಳಕ್ಕೆ ಹೋದಕೂಡಲೇ

ಬಲವಾದ ಕೆಮ್ಮು ಶುರುವಾಗುತ್ತದೆ. ಸ್ವಲ್ಪ ಹೊತ್ತಿನ ನಂತರ ಉಸಿರಾಟಕ್ಕೆ ತೊಂದರೆಯಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಅರಿವು ತಪ್ಪಿಸಿ ಕೊಳವೆಗಳ ಸಹಾಯದಿಂದ ಈ ಪದಾರ್ಥಗಳನ್ನು ಹೊರತೆಗೆಯಬೇಕು. ತಾನೇ ತಾನಾಗಿ ಕೆಮ್ಮಿನಲ್ಲಿ ಹೊರಕ್ಕೆ ಬರುತ್ತದೆ ಎಂದು ಬಿಟ್ಟರೆ ಪುಪ್ಪುಸಕ್ಕೆ ಧಕ್ಕೆಯಾಗುವುದೇ ಹೊರತು ಅವು ಎಂದಿಗೂ ಹೊರ ಬರುವುದಿಲ್ಲ. ಎಷ್ಟು ಬೇಗ ಇವನ್ನು ಹೊರತೆಗೆದರೆ ಅಷ್ಟು ಒಳ್ಳೆಯದು. ಇಲ್ಲದಿದ್ದರೆ ಪ್ರಾಣಾಪಾಯ ಸಂಭವಿಸಬಹುದು.

## ಉಪಸಂಹಾರ

ಮನುಷ್ಯನ ದೇಹಕ್ಕೆ ತ್ರಿಮೂರ್ತಿಗಳಂತಿರುವ ಕಿವಿ, ಮೂಗು, ಗಂಟಲಿನ ರೋಗಗಳ ಗುಣ ಲಕ್ಷಣಗಳನ್ನು ಈವರೆಗೆ ಈ ಕಿರು ಹೊತ್ತಿಗೆಯಲ್ಲಿ ಓದಿದ್ದೀರಿ. ಈ ಭಾಗಗಳಲ್ಲಿ ಕಾಣಬರುವ ಸಾಮಾನ್ಯ ರೋಗಗಳನ್ನಷ್ಟೇ ವಿಶ್ಲೇಷಿಸಲಾಗಿದೆ. ರೋಗ ಬಂದಾಗ ತೊಂದರೆ ಪಡುವುದಕ್ಕಿಂತ ರೋಗದ ಮುನ್ಸೂಚನೆಯನ್ನು ತಿಳಿದು ರೋಗವು ಉಲ್ಬಣಾವಸ್ಥೆಗೆ ಹೋಗದಂತೆ ನೋಡಿಕೊಳ್ಳುವುದು ಉತ್ತಮ. ಈ ದಿಶೆಯಲ್ಲಿ ಜನಸಾಮಾನ್ಯರಿಗೆ ಉಪಯೋಗವಾಗಲಿ ಎಂಬ ಉದ್ದೇಶದಿಂದ ಈ ಕಿರು ಹೊತ್ತಿಗೆಯನ್ನು ಬರೆಯಲಾಗಿದೆ. ಇದು ಕಿವಿ, ಮೂಗು, ಗಂಟಲು ರೋಗಗಳನ್ನು ಕುರಿತ ಪಠ್ಯಪುಸ್ತಕವಲ್ಲ. ಆ ರೋಗಗಳ ಲಕ್ಷಣ, ವೈದ್ಯಕೀಯ ಚಿಕಿತ್ಸೆ ಕುರಿತ

ಪಕ್ಷಿನೋಟವಿದು. ಆದರೂ ಅಲ್ಲಲ್ಲಿ ಕೆಲವು ವೈದ್ಯಕೀಯ ಮತ್ತು ತಾಂತ್ರಿಕ ಶಬ್ದಗಳನ್ನು ಉಪಯೋಗಿಸಲಾಗಿದೆ. ಇದು ಅನಿವಾರ್ಯ. ಕಿವಿ, ಮೂಗು, ಗಂಟಲಿನ ಸಾಮಾನ್ಯ ರೋಗಗಳ ಗುಣ, ಲಕ್ಷಣ ತಿಳಿದುಕೊಂಡು ಪ್ರಥಮ ಹಂತದಲ್ಲೇ ಚಿಕಿತ್ಸೆ ಮಾಡಿಸಿ ಆನಂದವಾಗಿ ದೀರ್ಘಕಾಲ ಬಾಳುವ ಭಾಗ್ಯ ಸಹೃದಯ ಓದುಗರದಾಗಲಿ, ಅದನ್ನು ಕಂಡು ತೃಪ್ತಿಪಡುವ ಪುಣ್ಯ ವೈದ್ಯನದಾಗಲಿ.



ಚಿತ್ರ : 1

ಗಡಸು ರೋಗದ ಪ್ರಥಮ ಹಂತ



ಚಿತ್ರ : 2
ಗಡಸು ರೋಗದ ಉಲ್ಬಣಾವಸ್ಥೆ



ಚಿತ್ರ : 3

ಕಿವಿಯ ಕ್ಯಾನ್ಸರ್- ಶಸ್ತ್ರ ಚಿಕಿತ್ಸೆಯ ನಂತರ



ಚಿತ್ರ : 4

ಕೃತಕ ಕಿವಿ ಜೋಡಣೆ.



ಚಿತ್ರ : 5

ಮೂಗು ಮತ್ತು ಮೂಗಿನ ಕುಹರದ ಕ್ಯಾನ್ಸರ್

(ಯಶಸ್ವಿ ಶಸ್ತ್ರ ಚಿಕಿತ್ಸೆಯ ನಂತರ)



ಚಿತ್ರ : 6
ಧ್ವನಿ ಕುಹರದ ಕ್ಯಾನ್ಸರ್



ಚಿತ್ರ : 7

ಧ್ವನಿ ಕುಹರದ ಕ್ಯಾನ್ಸರ್- ಶಸ್ತ್ರ ಚಿಕಿತ್ಸೆಯ ನಂತರ ಸಂಪೂರ್ಣ ಗುಣ ಪಡೆದಿರುವ ಭಾಗ್ಯಶಾಲಿ.



ಚಿತ್ರ : ೪

ಕಿವಿ, ಮೂಗು, ಗಂಟಲಿನಿಂದ ತೆಗೆದ ಅನ್ಯ ಪದಾರ್ಥಗಳು

# ಉಪನ್ಯಾಸ ಗ್ರಂಥ ಮಾಲೆಯ ಕೆಲವು ಪ್ರಕಟಣೆಗಳು

1. ಆಚಣ್ಣ ಕವಿಯ ವರ್ಧಮಾನ ಪುರಾಣ
   - ಬಿ. ಬಿ. ಮಹೀಶವಾಡಿ
2. ಕನ್ನಡದಲ್ಲಿ ತ್ರಿಪದಿ ಸಾಹಿತ್ಯ
   - ಎಸ್. ಎನ್. ಕೋಟಿನ
3. ಕನ್ನಡ ಸಾಹಿತ್ಯದಲ್ಲಿ ದುರಂತ - ದೃಷ್ಟಿ
   - ಎಚ್. ಜಿ. ಲೋಕೂರು
4. ದ್ರಾವಿಡ ಭಾಷೆಗಳು - ಸಂಗಮೇಶ ಸವದತ್ತಿಮಠ
5. ಪೋಲಿಯೋ ಮೈಲೈಟಿಸ್
   - ಎಸ್. ಜೆ. ನಾಗಲೋಟಿಮಠ
6. ಕಾರ್ಮಿಕರ ಸಮಸ್ಯೆಗಳು - ಎಸ್. ಜಿ. ಕರಬಂಟನಾಳ
7. ಅನುಭಾವಿ ಕವಿ ಕಡಕೋಳ ಮಡಿವಾಳಪ್ಪ
   - ಲಿಂಗಣ್ಣ ಸತ್ಯಂಪೇಟ
8. ಅಣಬೆಗಳು - ಎಂ. ಎಸ್. ಎಸ್. ರಾವ್
9. ಜಗನ್ನಾಥದಾಸರ ಹಿರಿಮೆ - ವಸಂತ ಕುಷ್ಟಗಿ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -3
ಮಾರ್ಚ್, 1992